# ನವಗ್ರಹ ವಿಚಾರ

| ಗ್ರಹಗಳು | ಜನ್ಮಸ್ಥಳ ಮತ್ತು ದೇಶಾಧಿಪತ್ಯ | ಗೋತ್ರ | ಶರೀರ ವರ್ಣ | ಗ್ರಹ ಮಂಡಲ ದಲ್ಲಿ ಸ್ಥಾನ | ದಿಗಭಿ ಮುಖ | ಧಾನ್ಯ | ವರ್ಣ/ ವಸ್ತ್ರ | ರತ್ನ | ಮಂಡಲ | ಪತ್ನಿ ಯರು | ಅಧಿ ದೇವತೆ | ಪ್ರತ್ಯಧಿ ದೇವತೆ | ಅಭಿಮಾನ ದೇವತೆ | ಜಪ ಸಂಖ್ಯೆ (ಮೂಲ ಮಂತ್ರ) | ಹೋಮ ಸಂಖ್ಯೆ | ತರ್ಪಣ ಸಂಖ್ಯೆ |
|---|---|---|---|---|---|---|---|---|---|---|---|---|---|---|---|---|
| ರವಿ | ಕಳಿಂಗ ದೇಶ | ಕಾಶ್ಯಪ | ಪದ್ಮವರ್ಣ ಕೆಂಪು | ಮಧ್ಯ | ಪೂರ್ವಾಭಿ ಮುಖ | ಗೋಧೂಮ (ಗೋಧಿ) | ಕೆಂಪು | ಮಾಣಿಕ್ಯ ಕೆಂಪು | ವರ್ತುಲಾಕಾರ | ಸಂಜ್ಞಾ, ಛಾಯ | ಅಗ್ನಿ | ಈಶ್ವರ | ಶಿವ | 7000 | 700 | 70 |
| ಚಂದ್ರ | ಯಾಮುನ ದೇಶ | ಆತ್ರೇಯ | ಶ್ವೇತ ವರ್ಣ | ಅಗ್ನೇಯ/ ಪೂರ್ವ | ಪಶ್ಚಿಮಾಭಿ ಮುಖ | ತಂಡುಲ (ಅಕ್ಕಿ) | ಬಿಳೀ (ಮುಕ್ತಾಫಲ) | ಮುತ್ತು | ಚತುರಸ್ರಾಕಾರ | ರೋಹಿಣಿ | ಆಪಃ | ಗೌರಿ | ದುರ್ಗಾ | 11,000 | 1,100 | 110 |
| ಕುಜ | ಆವಂತಿ ದೇಶ (ವಿಂಧ್ಯದೇಶ) | ಭಾರಧ್ವಾಜ | ರಕ್ತ ವರ್ಣ | ದಕ್ಷಿಣ/ ಆಗ್ನೇಯ | ದಕ್ಷಿಣಾಭಿ ಮುಖ | ಆಢಕ (ತೊಗರಿ) | ಅರೆಕೆಂಪು | ಪ್ರವಾಳ (ಹವಳ) | ತ್ರಿಕೋಣಾಕಾರ | ಶಕ್ತೀ | ಪೃಥಿವೀ | ಸ್ಕಂದ | ಸುಬ್ರಹ್ಮಣ್ಯ | 10,000 | 1,000 | 100 |
| ಬುಧ | ಮಗಧ ದೇಶ | ಆತ್ರೇಯ | ಪೀತ ವರ್ಣ | ಈಶಾನ್ಯ / ದಕ್ಷಿಣ | ಉತ್ತರಾಭಿ ಮುಖ | ಮುದ್ಗ (ಹೆಸಿರು) | ಹಸಿರು | ಮರಕತ (ಪಚ್ಚೆ) | ಬಾಣಾಕಾರ | ಜ್ಞಾನೀ | ವಿಷ್ಣು | ನಾರಾಯಣ | ವಿಷ್ಣು | 4,000 | 400 | 40 |
| ಗುರು | ಸಿಂಧೂ ದೇಶ | ಆಂಗೀರಸ | ಹೇಮ ವರ್ಣ | ಉತ್ತರ | ಉತ್ತರಾಭಿ ಮುಖ | ಚಣಕ (ಕಡಲೆ) | ಹಳದಿ | ಪುಷ್ಯರಾಗ | ದೀರ್ಘಚತು ರಸ್ರಾಕಾರ | ತಾರಾ | ಇಂದ್ರ | ಬ್ರಹ್ಮ | ವಿಷ್ಣು, ರುದ್ರ | 19,000 | 1,900 | 190 |
| ಶುಕ್ರ | ಪಾಂಚಾಲ ದೇಶ | ಮೌನ ಭಾರ್ಗಾವ | ಶ್ವೇತ ವರ್ಣ | ಪೂರ್ವ / ಪಶ್ಚಿಮ | ಪೂರ್ವಾಭಿ ಮುಖ | ನಿಷ್ಪಾವ (ಅವರೆ) | ಬಿಳಿ ಮತ್ತು ಹಸಿರು ಮಿಶ್ರ | ವಜ್ರ | ಪಂಚಕೋಣಾ ಕಾರ | ಸುಕೀರ್ತಿ | ಇಂದ್ರಾಣಿ | ಶಕ್ರ | ಲಕ್ಷ್ಮೀ | 16,000 | 1,600 | 160 |
| ಶನಿ | ಸೌರಾಷ್ಟ್ರ ದೇಶ | ಕಾಶ್ಯಪ | ಗಾಢನೀಲ ವರ್ಣ | ಪಶ್ಚಿಮ / ನೈಋತ್ಯ | ಪಶ್ಚಿಮಾಭಿ ಮುಖ | ತಿಲ (ಕರೀ ಎಳ್ಳು) | ನೀಲಿ | ನೀಲ | ಧನುರಾಕಾರ | ಜ್ಯೇಷ್ಠಾ | ಪ್ರಜಾಪತಿ | ಯಮ | ತ್ರಿಮೂರ್ತಿ ಗಳು | 23,000 | 2,300 | 230 |
| ರಾಹು | ಸಿಂಹಳ ದೇಶ | ಪೈಠೀನಸ | ಧೂಮ ವರ್ಣ | ನೈಋತ್ಯ / ವಾಯವ್ಯ | ದಕ್ಷಿಣಾಭಿ ಮುಖ | ಮಾಷ (ಉದ್ದು) | ಹೊಗೆಬಣ್ಣ | ಗೋಮೇಧಿಕ | ಶೂರ್ಪಾಕಾರ | ಸಿಂಹಿ | ಸರ್ಪ | ಕಾಲ | ನಾಗ | 18,000 | 1,800 | 180 |
| ಕೇತು | ಬರ್ಬರ ದೇಶ | ಜೈಮಿನಿ | ಚಿತ್ರ ವರ್ಣ | ವಾಯವ್ಯ / ಈಶಾನ್ಯ | ದಕ್ಷಿಣಾಭಿ ಮುಖ | ಕುಳಿತ್ಥ (ಹುರಳಿ) | ನಾನಾವರ್ಣ ಮಿಶ್ರವರ್ಣ | ವೈಢೂರ್ಯ | ಧ್ವಜಾಕಾರ | ಚಿತ್ರಲೇಖಾ | ಬ್ರಹ್ಮ | ಚಿತ್ರಗುಪ್ತ | ವಿನಾಯಕ | 17,000 | 1,700 | 170 |

## ಋಗ್ವೇದ ಮತ್ತು ಯಜುರ್ವೇದ ರೀತ್ಯಾ ಗ್ರಹಸ್ಥಾಪನೆ

| ಈಶಾನ್ಯ | ಪೂರ್ವ | ಆಗ್ನೇಯ |
|---|---|---|
| ಬುಧ ಹೆಸರು | ಶುಕ್ರ ಅವರೆ | ಚಂದ್ರ ಅಕ್ಕಿ |
| ಗುರು ಕಡಲೆ | ರವಿ ಗೋಧಿ | ಕುಜ ತೊಗರಿ |
| ಕೇತು ಹುರಳಿ | ಶನಿ ಎಳ್ಳು | ರಾಹು ಉದ್ದು |
| ವಾಯವ್ಯ | ಪಶ್ಚಿಮ | ನೈಋತ್ಯ |

(ಎಡಕ್ಕೆ: ಉತ್ತರ; ಬಲಕ್ಕೆ: ದಕ್ಷಿಣ)

## ಗ್ರಹಗಳ ಸ್ಥಾನ, ಕಾರಕತ್ವ, ಸ್ವಭಾವ, ಗೋಚಾರ ಫಲ ದಶಾ ಶಾಂತಿ ಇತ್ಯಾದಿಗಳು

| | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ಉಚ್ಛಸ್ಥಾನ | ಮೇಷ $10^0$ | ವೃಷಭ $3^0$ | ಮಕರ $28^0$ | ಕನ್ಯಾ $15^0$ | ಕಟಕ $5^0$ | ಮೀನ $27^0$ | ತುಲಾ $20^0$ | ಮಿಥುನ | ಧನುಸ್ಸು |
| ಮೂಲತ್ರಿಕೋಣ | ಸಿಂಹ | ವೃಷಭ | ಮೇಷ | ಕನ್ಯಾ | ಧನುಸ್ಸು | ತುಲಾ | ಕುಂಭ | ಸಿಂಹ | ಕುಂಭ |
| ನೀಚಸ್ಥಾನ | ತುಲಾ $10^0$ | ವೃಶ್ಚಿಕ $3^0$ | ಕಟಕ $28^0$ | ಮೀನ $15^0$ | ಮಕರ $5^0$ | ಕನ್ಯಾ $27^0$ | ಮೇಷ $20^0$ | ಧನುಸ್ಸು | ಮಿಥುನ |
| ಜಾತಿ | ಕ್ಷತ್ರಿಯ | ವೈಶ್ಯ | ಕ್ಷತ್ರಿಯ | ವೈಶ್ಯ | ಬ್ರಾಹ್ಮಣ | ಬ್ರಾಹ್ಮಣ | ಶೂದ್ರ | ಚಂಡಾಲ | ಚಂಡಾಲ |
| ದೃಷ್ಟಿ | 7 | 7 | 4,8,7 | 7 | 5,9,7 | 7 | 3,10,7 | 7 | 7 |
| ಕಾರಕತ್ವ | ಪಿತೃ | ಮಾತೃ | ಭ್ರಾತೃ | ಪ್ರಜ್ಞಾ | ಪುತ್ರ | ಕಳತ್ರ | ಆಯುಷ್ಯ | ಮಾತಾಮಹ | ಪಿತಾಮಹ |
| ಗುಣ | ಸತ್ವ | ಸತ್ವ | ತಮೋಗುಣ | ರಜೋಗುಣ | ಸತ್ವ | ರಜೋಗುಣ | ತಮೋಗುಣ | ತಮೋಗುಣ | ತಮೋಗುಣ |
| ಲಿಂಗ | ಪುರುಷ | ಸ್ತ್ರೀ | ಪುರುಷ | ನಪುಂಸಕ | ಪುರುಷ | ಸ್ತ್ರೀ | ನಪುಂಸಕ | ಸ್ತ್ರೀ | ನಪುಂಸಕ |
| ಪ್ರಕೃತಿ | ಪಿತ್ತ | ವಾತ, ಕಫ | ಪಿತ್ತ | ಪಿತ್ತ, ವಾತ, ಶ್ಲೇಷ್ಮ | ಕಫ | ವಾತ, ಕಫ | ವಾತ, ಕಫ | ವಾತ,ಕಫ | ವಾತ |
| ಮಿತ್ರ | ಚಂ, ಕು, ಗು | ರ, ಬು | ಗು, ಚಂ, ರ | ರ, ಶು | ರ, ಚಂ, ಕು | ಬು, ಶನಿ | ಬು, ಶು | ಶು, ಶನಿ | ಶು, ಶನಿ |
| ಸಮ | ಬುಧ | ಕು, ಗು, ಶು, ಶನಿ | ಶು, ಶನಿ | ಕು, ಗು, ಶನಿ | ಶನಿ | ಕು, ಗು | ಗುರು | – | – |

॥ ಶ್ರೀರಸ್ತು ॥ ಶ್ರೀಲ–ಶ್ರೀಸೀ–ಶ್ರೀಪ–ಪ್ರಸೀದತು ॥

ಪಂಚಾಂಗಮಂದಿರ, ವಾಣೀವಿಲಾಸ ಮೊಹಲ್ಲ, ಮೈಸೂರು - 2.

ಸೂರ್ಯಸಿದ್ಧಾಂತ, ವಾಕ್ಯ, ಆರ್ಯಭಟೀಯ ಸಿದ್ಧಾಂತ, ದೃಗ್ಗಣಿತ ಈ ನಾಲ್ಕು ಸೇರಿದ





# ಶ್ರೀ ಶೋಭಕೃನ್ನಾಮ ಸಂವತ್ಸರದ ಮೈಸೂರು ಪಂಚಾಂಗ

## 22-03-2023 ರಿಂದ 08-04-2024

ಸ್ಫುರದ್ವಿರಾಮಂ ಸರಸೀರುಹಾಕ್ಷಂ। ನಾನಾಮಣಿ ರಾಜಿತ ಶಂಖಚಕ್ರಂ ॥

ಧನುರ್ಧರಂ ಸಾಯಕ ದಿವ್ಯಹಸ್ತಂ। ನಮಾಮಿ ವಿಷ್ಣುಂ ಶಿರಸಾ ಚತುರ್ಭುಜಂ ॥

**ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ। ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣೀ ನಮೋಽಸ್ತುತೇ ॥**


ಪಂಚಾಂಗಕರ್ತರು

ಆಸ್ಥಾನ ಮಹಾವಿದ್ವಾನ್, ಜ್ಯೌತಿಷರತ್ನಂ,
ಸಿದ್ಧಾಂತಿ ತಮ್ಮಯ್ಯಶಾಸ್ತ್ರಿಗಳ ಪ್ರಪೌತ್ರರೂ
ದೈವಜ್ಞಭೂಷಣ, ಜ್ಯೌತಿಷಾಲಂಕಾರ,
ಜ್ಯೋತಿರ್ವಿದ್ಯಾರತ್ನ,
ಜ್ಯೋತಿರ್ಗಣಿತ ಚತುಷ್ಟಯ ಪಾರಂಗತ,
ಸಿದ್ಧಾಂತಿ ಟಿ. ಎ. ಕೃಷ್ಣಶಾಸ್ತ್ರಿಗಳ ಪೌತ್ರರೂ
ಜ್ಯೋತಿರ್ಭೂಷಣ, ದೈವಜ್ಞಮಣಿ,
ಜ್ಯೋತಿರ್ವಿದ್ಯಾಭಾಸ್ಕರ, ಜ್ಯೌತಿಷರತ್ನಂ,
ಜ್ಯೋತಿಶ್ಶಾಸ್ತ್ರವಾಚಸ್ಪತಿ, ಜ್ಯೌತಿಷಕೇಸರಿ,
ಶಾಸ್ತ್ರವಿದ್ಯಾನಿಧಿ, ಜ್ಯೋತಿಶ್ಶಾಸ್ತ್ರಶಿರೋಮಣಿ,
ಸಿದ್ಧಾಂತಿ ಎ. ರಾಮಕೃಷ್ಣಶಾಸ್ತ್ರಿಗಳ
ಪುತ್ರರೂ ಆದ
ಜ್ಯೋತಿರ್ವಿದ್ಯಾರತ್ನ, ಜ್ಯೌತಿಷಕೇಸರಿ,
ಜ್ಯೋತಿಶ್ಶಾಸ್ತ್ರವಿಶಾರದ,
ಆರ್. ಕುಮಾರ್, B.Sc., M.Ed., LL.B.,







ಪಂಚಾಂಗಕರ್ತರು

ದೈವಜ್ಞಭೂಷಣ, ಜ್ಯೌತಿಷಾಲಂಕಾರ,
ಜ್ಯೋತಿರ್ವಿದ್ಯಾರತ್ನ,
ಜ್ಯೋತಿರ್ಗಣಿತ ಚತುಷ್ಟಯ ಪಾರಂಗತ,
ಸಿದ್ಧಾಂತಿ ಟಿ. ಎ. ಕೃಷ್ಣಶಾಸ್ತ್ರಿಗಳ ಪ್ರಪೌತ್ರರೂ
ಜ್ಯೋತಿರ್ಭೂಷಣ, ದೈವಜ್ಞಮಣಿ,
ಜ್ಯೋತಿರ್ವಿದ್ಯಾಭಾಸ್ಕರ, ಜ್ಯೌತಿಷರತ್ನಂ,
ಜ್ಯೋತಿಶ್ಶಾಸ್ತ್ರವಾಚಸ್ಪತಿ, ಜ್ಯೌತಿಷಕೇಸರಿ,
ಶಾಸ್ತ್ರವಿದ್ಯಾನಿಧಿ, ಜ್ಯೋತಿಶ್ಶಾಸ್ತ್ರಶಿರೋಮಣಿ,
ಸಿದ್ಧಾಂತಿ ಎ. ರಾಮಕೃಷ್ಣಶಾಸ್ತ್ರಿಗಳ
ಪೌತ್ರರೂ
ಜ್ಯೋತಿರ್ವಿದ್ಯಾರತ್ನ, ಜ್ಯೌತಿಷಕೇಸರಿ,
ಜ್ಯೋತಿಶ್ಶಾಸ್ತ್ರವಿಶಾರದ,
ಆರ್. ಕುಮಾರ್, B.Sc., M.Ed., LL.B.
ರವರ ಪುತ್ರರೂ ಆದ
ಕೆ. ಮನೋಹರ್, M.Com., M.B.A., P.G.D.M.M., M.A., M.A. ( [illegible] )


**ಪ್ರಥಮ ವರ್ಷದ ಪ್ರಕಟಣೆ**
**ಶ್ರೀ ಸರ್ವಜಿತ್ ಸಂವತ್ಸರ**
**1887-1888**



**ಬೆಲೆ ರೂ. 160**

**136ನೇ ವರ್ಷದ ಪ್ರಕಟಣೆ**
**ಶ್ರೀ ಶೋಭಕೃನ್ನಾಮ ಸಂವತ್ಸರ**
**2023-2024**

## ವಿಜ್ಞಾಪನೆ

ಶುಕ್ಲಾಂಬರಧರಂ ವಿಷ್ಣುಂ । ಶಶಿವರ್ಣಂ ಚತುರ್ಭುಜಂ ॥
ಪ್ರಸನ್ನವದನಂ ಧ್ಯಾಯೇತ್ । ಸರ್ವವಿಘ್ನೋಪ ಶಾಂತಯೇ ॥

ಪ್ರಿಯ ಮಹಾಶಯರೇ,

ತಮ್ಮೆಲ್ಲರ ಉದಾರ ಪ್ರೋತ್ಸಾಹದಿಂದ ಶ್ರೀ ಶೋಭಕೃತ್ ಸಂವತ್ಸರದ ಪಂಚಾಂಗವನ್ನು ಗುಣಿಸಿ, ಪ್ರಕಟಿಸಿರುತ್ತೇವೆ.

ಪುಟ 16 ರಿಂದ 41ರ ವರೆಗೆ ಸೂರ್ಯಸಿದ್ಧಾಂತ, ವಾಕ್ಯ, ಆರ್ಯಭಟೀಯ ಗಣಿತರೀತ್ಯಾ ಕೊಟ್ಟಿರುವ ಚೈತ್ರಾದಿ ಮಾಸಗಳ ಪಂಚಾಂಗವನ್ನು ಧರ್ಮಶಾಸ್ತ್ರ ಸಂಬಂಧವಾದ ಹಬ್ಬ, ವ್ರತ, ಶ್ರಾದ್ಧಾದಿಗಳನ್ನಾಚರಿಸಲು, ಪುಟ 44 ರಿಂದ ಕೊಟ್ಟಿರುವ ಚೈತ್ರಾದಿ ದೃಗ್ಗಣಿತ ಪಂಚಾಂಗವನ್ನು ಜಾತಕ, ಮುಹೂರ್ತಗಳಿಗೆ ಉಪಯೋಗಿಸಬೇಕು.

ಪ್ರತಿ ಮಾಸದಲ್ಲೂ ಬರುವ ಶುಕ್ಲಪಕ್ಷ, ಕೃಷ್ಣಪಕ್ಷಗಳ ಮಾಹಿತಿಯನ್ನು ಒಂದೇ ಸಲ ಅವಲೋಕಿಸುವಂತೆ ಪಂಚಾಂಗವನ್ನು ಮುದ್ರಣ ಮಾಡಬೇಕೆಂಬ ಮಹಾಜನಗಳ ಅಪೇಕ್ಷೆಗನುಗುಣವಾಗಿ ಮುದ್ರಿಸಿ **Top Stitch** ನಿಂದ ಪಂಚಾಂಗವನ್ನು ಮಾರಾಟಕ್ಕೆ ಬಿಡುಗಡೆ ಮಾಡಿದ್ದೇವೆ.

ಮುಹೂರ್ತ ನಿಶ್ಚಯಿಸಲೂ, ಪ್ರಶ್ನಫಲ ಮತ್ತು ಜಾತಕ ಬರೆಯಲು ಉಪಯುಕ್ತವಾದ ಶ್ರೀ ಶೋಭಕೃತ್ ಸಂವತ್ಸರದ ನಿತ್ಯಕುಂಡಲಿ ಮತ್ತು ಗ್ರಹಸ್ಫುಟ (Ready Reckoner) ಪುಸ್ತಕವನ್ನೂ, ಅಮೇರಿಕಾದಲ್ಲಿ ನೆಲೆಸಿರುವ ಭಾರತೀಯರು ಹಬ್ಬ, ವ್ರತ ಮೊದಲಾದವುಗಳನ್ನು ಆಚರಿಸಲು ಮತ್ತು ಅಮೇರಿಕಾದಲ್ಲಿ ಜನಿಸಿರುವವರ ಜಾತಕಗಳನ್ನು ಬರೆಯಲು ಅವಶ್ಯಕವಾದ ಶ್ರೀ ಶೋಭಕೃತ್ ಸಂತ್ಸರದ ಅಮೇರಿಕಾ ಪಂಚಾಂಗವನ್ನೂ ಸಹ ಮಾರಾಟಕ್ಕೆ ಬಿಡುಗಡೆ ಮಾಡಿರುತ್ತೇವೆ.

ಮುದ್ರಣ ಕಾಗದದ ಕೊರತೆಯಿಂದಾಗಿ ಕಾಗದ ಬೆಲೆ ವಿಪರೀತವಾಗಿ ಹೆಚ್ಚಾಗಿರುವುದರಿಂದ ಪಂಚಾಂಗದ ಬೆಲೆಯನ್ನು ಅನಿವಾರ್ಯವಾಗಿ ಸ್ವಲ್ಪಮಟ್ಟಿಗೆ ಹೆಚ್ಚಿಸಲಾಗಿದೆ.

ಮಹಾಜನಗಳು ಎಂದಿನಂತೆ ನಮ್ಮ ಪಂಚಾಂಗ ಮತ್ತು ಇತರ ಪ್ರಕಟಣೆಗಳನ್ನು ಖರೀದಿಸುವ ಮೂಲಕ ಪ್ರೋತ್ಸಾಹಿಸುವಿರಾಗಿ ನಂಬಿರುತ್ತೇವೆ.

ಸಜ್ಜನ ವಿಧೇಯರು

ಆರ್. ಕುಮಾರ್

ಕೆ. ಮನೋಹರ್

ಪಂಚಾಂಗಕರ್ತರು

## ವಿಷಯ ಸೂಚಿ


| | ವಿಷಯ | ಪುಟ |
|---|---|---|
| 01. | ಮುಖಪುಟ | 1 |
| 02. | ವಿಜ್ಞಾಪನೆ | 2 |
| 03. | ಯುಗಾದಿ ಹಬ್ಬ ಆಚರಣೆ–ಪಂಚಾಂಗಶ್ರವಣ | 3 |
| 04. | ಪಂಚಾಂಗ ಪೀಠಿಕಾ ಪ್ರಕರಣ | 4 |
| 05. | ಮಕರ ಸಂಕ್ರಾಂತಿ ಫಲಂ | 6 |
| 06. | ಗುರು, ಶನಿ ರಾಶಿ ಸಂಚಾರ ಕಾಲಗಳು | 6 |
| 07. | ಗುರು, ಶುಕ್ರ ಅಸ್ತೋದಯ ಕಾಲ | 6 |
| 08. | ಧರ್ಮಶಾಸ್ತ್ರವಿಚಾರ | 7 |
| 09. | ಗ್ರಹಣ ವಿಚಾರ | 8 |
| 10. | ವೃಷ್ಟಿ (ಮಳೆ) ಯೋಗ | 9 |
| 11. | ರಥೋತ್ಸವಾದಿಗಳು | 9 |
| 12. | ದ್ವಾದಶ ಸಂಕ್ರಮಣ ಪುಣ್ಯಕಾಲಗಳು | 13 |
| 13. | ಷಣ್ಣವತಿ ಶ್ರಾದ್ಧಗಳು | 14 |
| 14. | ಲಗ್ನವಿಷ್ಯ ಪದಕ | 15 |
| 15. | ಚೈತ್ರಾದಿ 13 ತಿಂಗಳುಗಳ ಪಂಚಾಂಗ | 16 |
| 16. | ಗೌರೀಗಣಪತಿ ಕಳುಹಿಸಲು ಮುಹೂರ್ತ | 28 |
| 17. | ಚಾಂದ್ರ ಶ್ರಾದ್ಧತಿಥಿ ನಿರ್ಣಯ | 42 |
| 18. | ಸೌರ ಶ್ರಾದ್ಧತಿಥಿ ನಿರ್ಣಯ | 43 |
| 19. | ದೃಗ್ಗಣಿತ ಪಂಚಾಂಗ | 44 |
| 20. | ಗ್ರಹಗಳ ನಕ್ಷತ್ರಪಾದ, ರಾಶಿಸಂಚಾರ, ವಕ್ರಾರಂಭ, ವಕ್ರತ್ಯಾಗ, ಅಸ್ತೋದಯಕಾಲಗಳು | 70 |
| 21. | ಲತ್ತಾಕಾಲ ಪದಕ | 73 |
| 22. | ದ್ವಾದಶ ರಾಶಿಯವರ ಗೋಚಾರ ಫಲ | 74 |
| 23. | ಮುಹೂರ್ತಗಳು | 76 |
| 24. | ನಾನಾ ಮುಹೂರ್ತಗಳು | 78 |
| 25. | ಉಪಯುಕ್ತ ಜ್ಯೌತಿಷ ವಿಷಯಗಳು | 80 |
| 26. | ವಿವಾಹೋಪಯುಕ್ತ ದ್ವಾದಶ ಕೂಟಗಳು | 83 |
| 27. | ಅಂಗಾರಕ ದೋಷ ವಿಚಾರ | 84 |
| 28. | ಆಯಾದಿ ವರ್ಗಗಳ ಗಣಿತ ಕ್ರಮ | 85 |
| 29. | ವಿವಾಹ ಘಟೀತಾರ್ಥ ಗುಣಪದಕ | 87 |
| 30. | ಕರ್ನಾಟಕ ಜಿಲ್ಲೆ ಮತ್ತು ತಾಲ್ಲೂಕುಗಳ ಅಕ್ಷಾಂಶಾದಿಗಳು | 90 |
| 31 | ಭಾರತದ ಪ್ರಮುಖ ಪಟ್ಟಣಗಳ ಮತ್ತು ವಿದೇಶಿ ಪಟ್ಟಣಗಳ ಅಕ್ಷಾಂಶಾದಿಗಳು | 92 |
| 32. | ಲಗ್ನಪ್ರಮಾಣಗಳು | 93 |
| 33. | ದೇಶಾಂತರ ಸಂಸ್ಕಾರ ಘಟೀ–ವಿಘಟೀ ಪದಕ | 94 |
| 34. | ಸೂರ್ಯೋದಯಾಸ್ತ ಕಾಲಗಳು | 95 |
| 35. | ನಿರಯಣ ಲಗ್ನಪ್ರಮಾಣಗಳು | 99 |
| 36. | ಷಡ್ವರ್ಗ ಪದಕ | 100 |
| 37. | ನವಾಂಶ ಪದಕ | 101 |
| 38. | ದಶಾ ವಿಷ್ಯ ಪದಕ | 102 |
| 39. | ದಶಾಂತರ್ದಶಾ ಪದಕ | 103 |
| 40. | ನಿಷೇಕಾದಿ ಶುಭಕಾರ್ಯಗಳಿಗೆ ಶ್ರೇಷ್ಠವಾದ ತಿಥ್ಯಾದಿ ವಿಚಾರ ಪದಕ | 105 |
| 41. | ನಾನಾ ಮುಹೂರ್ತ ಪ್ರಕರಣ | 107 |
| 42. | ಗೋತ್ರ ಪ್ರವರ ಕೋಷ್ಟಕ | 108 |
| 43. | ತರ್ಪಣ ವಿಚಾರ | 110 |
| 44. | ಶಾಂತಿ ವಿಚಾರ | 112 |
| 45. | ನವಗ್ರಹ ವಿಚಾರ | ರಕ್ಷಾ ಪುಟ 2–3 |

# ಯುಗಾದಿ ಹಬ್ಬ ಆಚರಣೆ – ಪಂಚಾಂಗ ಶ್ರವಣ

ಯುಗಾದಿ ಹಬ್ಬವನ್ನು ಚಾಂದ್ರಮಾನ ಮತ್ತು ಸೌರಮಾನ ರೀತಿಯಾಗಿ ಆಚರಿಸುವ ಎರಡು ಪದ್ಧತಿಗಳು ನಮ್ಮಲ್ಲಿವೆ. ಈ ವರ್ಷ ಚಾಂದ್ರಮಾನ ರೀತಿ ಸೂರ್ಯ ಸಿದ್ಧಾಂತ ಗಣಿತ ರೀತ್ಯಾ ಚೈತ್ರ ಶುಕ್ಲ ಪ್ರತಿಪತ್ ತಾ ॥ 22-03-23 ನೇ ಬುಧವಾರವೂ, ಸೌರಮಾನ ರೀತಿ ಸೂರ್ಯನು ನಿರಯಣ ಮೇಷರಾಶಿ ಪ್ರವೇಶಿಸುವ ಪುಣ್ಯಕಾಲದ ದಿನ ತಾ ॥ 14-04-23 ನೇ ಶುಕ್ರವಾರವೂ ಯುಗಾದಿ ಹಬ್ಬ ಆಚರಿಸಬೇಕು.

### ಆಚರಣೆಯ ಕ್ರಮ :

ಶ್ಲೋ ॥ ವರ್ಷಾದಾವುಷಸಿಸ್ಮರನ್ರಘುಪತಿಂ ಚೋತ್ಥಾಯ ಚಂದ್ರಸ್ವರೇ
ವೃದ್ಧಾಶೀರನುಗೃಹ್ಯ ನಿಂಬಕದಳಂ ಪ್ರಾಶ್ಯಾಜ್ಯಪಾತ್ರೇ ಸ್ಥಿತಂ ।
ವಕ್ತ್ರಂ ವೀಕ್ಷ್ಯ ಚದರ್ಪಣೇನ ಚ ತಥಾ ಸನ್ಮಿತ್ರವರ್ಗೈಸ್ಸಮಂ
ದೈವಜ್ಞಸ್ಸುಸಭಾಂ ಪ್ರವಿಶ್ಯ ಸುಜನಾನ್ವಾರ್ಷಂ ಫಲಂ ಶ್ರಾವಯೇತ್॥

ಈ ದಿನ ಉಷಃ ಕಾಲದಲ್ಲಿ ಪರಮಾತ್ಮನ ಸ್ಮರಣೆ ಮಾಡುತ್ತಾ ಹಾಸಿಗೆಯಿಂದ ಎದ್ದು, ನಿತ್ಯಕರ್ಮಗಳನ್ನು ಮುಗಿಸಿ, ದೇವರ ಮನೆ, ಮನೆಯ ಮುಖ್ಯದ್ವಾರಗಳನ್ನು ರಂಗವಲ್ಲಿ ತೋರಣಾದಿಗಳಿಂದ ಸಿಂಗರಿಸಿ, ಅಭ್ಯಂಜನ ಸ್ನಾನ ಮಾಡಿ, ಸಂಧ್ಯಾವಂದನಾದಿಗಳನ್ನಾಚರಿಸಿ, ಹೊಸ ವರ್ಷದ ಪಂಚಾಂಗವನ್ನು ದೇವರ ಸಮೀಪವಿಟ್ಟು ಪೂಜಾ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡು ಶ್ರೀ ಮಹಾಗಣಪತಿ ಪೂಜಾ ಪೂರ್ವಕ ಕುಲದೇವತಾರ್ಚನೆ ನಡೆಸಬೇಕು. ಅನಂತರ ಬೇವು ಬೆಲ್ಲ ಸೇವಿಸಿ ಸನ್ಮಿತ್ರರೊಡಗೂಡಿ, ಸುಜನರುಗಳಿಂದ ಕೂಡಿರುವ ಸಭೆಯಲ್ಲಿ ದೈವಜ್ಞರು ಪಠನ ಮಾಡುವ ಪಂಚಾಂಗ ಶ್ರವಣವನ್ನು ಆಲಿಸಬೇಕು.

ಪೂಜಾ ಸಂಕಲ್ಪ : ಆಚಮ್ಯ, ಪ್ರಾಣಾನಾಯಮ್ಯಾನಂತರ ಸಂಕಲ್ಪ ಈ ರೀತಿ ಮಾಡಬೇಕು. ಶುಭತಿಥೌ ಶೋಭನೇ ಮುಹೂರ್ತೇ ..... ಅಸ್ಮಿನ್ ವರ್ತಮಾನೇ, ವ್ಯಾವಹಾರಿಕೇ, ಚಾಂದ್ರಮಾನೇನ ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ ಶ್ರೀ ಶೋಭಕೃನ್ನಾಮ ಸಂವತ್ಸರೇ, ಉತ್ತರಾಯಣೇ, ವಸಂತ ಋತೌ, ಚೈತ್ರ ಮಾಸೇ, ಶುಕ್ಲ ಪಕ್ಷೇ ಪ್ರಥಮಾಯಾಂ ಸೌಮ್ಯವಾಸರಯುಕ್ತಾಯಾಂ (ಚಾಂದ್ರಮಾನ -ರೀತ್ಯಾ)

ಅಥವಾ

ಚೈತ್ರ ಕೃಷ್ಣ ನವಮ್ಯಾಂ ಭಾರ್ಗವವಾಸರಯುಕ್ತಾಯಾಂ (ಸೌರಮಾನ ರೀತಿ) ..... ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ.

ಅನಂತರ ಕಲಶಪೂಜೆ, ಗಣಪತಿ ಪೂಜೆ, ದ್ವಾರಪಾಲಕ ಪೂಜೆ, ಪೀಠಪೂಜೆ, ಧ್ಯಾನಾವಾಹನ, ಪಂಚಾಮೃತಾಭಿಷೇಕ, – ಸ್ನಾನ, ಉಪವೀತ, ವಸ್ತ್ರ , ಗಂಧಾಕ್ಷತೆ, ಮಂಗಳದ್ರವ್ಯಗಳಿಂದ ಪೂಜೆ, ನಾಮಪೂಜೆ, ಧೂಪ, ದೀಪ,ನೈವೇದ್ಯ, ಮಹಾಮಂಗಳಾರತಿ, ಮಂತ್ರ ಪುಷ್ಪಗಳಿಂದ ಪೂಜಿಸಬೇಕು. ಪ್ರದಕ್ಷಿಣ ನಮಸ್ಕಾರ, ಪ್ರಾರ್ಥನಾನಂತರ ಪುನಃ ಪೂಜೆ ಪ್ರಾರಂಭಿಸಬೇಕು.

ಪುನಃ ಪೂಜಾರಂಭದಲ್ಲಿ ಛತ್ರಂ ಸಮರ್ಪಯಾಮಿ, ಚಾಮರಂ ಸಮರ್ಪಯಾಮಿ, ಗೀತಂ ಶ್ರಾವಯಾಮಿ, ನೃತ್ಯಂ ದರ್ಶಯಾಮಿ, ವಾದ್ಯಂ ಸಮರ್ಪಯಾಮಿ, ಆಂದೋಳಿಕಾರೋಹಣಂ ಸಮರ್ಪಯಾಮಿ,. ಅಶ್ವಾರೋಹಣಂ ಸಮರ್ಪಯಾಮಿ, ಗಜಾರೋಹಣಂ ಸಮರ್ಪಯಾಮಿ, ಪುರಾಣ ಪಠನಂ ಸಮರ್ಪಯಾಮಿ, ಪಂಚಾಂಗ ಶ್ರವಣಂ ಸಮರ್ಪಯಾಮಿ ಎಂಬುವಾಗ ದೇವರ ಬಳಿ ಇಟ್ಟು ಪೂಜಿಸಿರುವ ಹೊಸ ವರ್ಷದ ಪಂಚಾಂಗವನ್ನು ತೆಗೆದು

ಶ್ಲೋ ॥ ಶ್ರೀಕಲ್ಯಾಣಗುಣಾವಹಂ ರಿಪುಹರಂ ದುಸ್ಸ್ವಪ್ನದೋಷಾಪಹಂ ।
ಗಂಗಾಸ್ನಾನ ವಿಶೇಷ ಪುಣ್ಯಫಲದಂ ಗೋದಾನತುಲ್ಯಂ ನೃಣಾಂ ॥
ಆಯುರ್ವೃದ್ಧಿದಮುತ್ತಮಂ ಶುಭಕರಂ ಸಂತಾನ ಸಂಪತ್ಪ್ರದಂ ।
ನಾನಾಕರ್ಮಸುಸಾಧನಂ ಸಮುಚಿತಂ ಪಂಚಾಂಗಮಾಕರ್ಣ್ಯತಾಂ ॥

ಎಂಬಂತೆ ಸಂಪದ್ಯುಕ್ತವಾದ ಸಕಲ ಗುಣಗಳನ್ನು ಹೊಂದಿರುವ, ಶತ್ರುನಾಶಕರವೂ, ದುಸ್ಸ್ವಪ್ನ ದೋಷ ನಿವಾರಕವೂ, ಗಂಗಾನದಿ ಸ್ನಾನದಿಂದುಂಟಾಗುವ ವಿಶೇಷ ಪುಣ್ಯಫಲದಾಯಕವೂ, ಗೋದಾನಕ್ಕೆ ಸಮಾನವೂ, ಜನರಿಗೆ ಆಯುರ್ವೃದ್ಧಿದಾಯಕವೂ, ಶುಭದಾಯಕವೂ, ಸುಸಂತಾನ ಸಂಪತ್ತನ್ನುಂಟು ಮಾಡುವುದೂ, ನಾನಾ ವಿಧ ಕರ್ಮಗಳಿಗೆ ಉತ್ತಮ ಸಾಧನವೂ ಆಗಿರುವ ಪಂಚಾಂಗ ಫಲವನ್ನು ಶ್ರವಣ ಮಾಡತಕ್ಕದ್ದು (ಕೇಳತಕ್ಕದ್ದು)

ಅಂದರೆ ಹೊಸ ವರ್ಷದ ಪೀಠಿಕಾ ಪ್ರಕರಣದಲ್ಲಿ ಕೊಟ್ಟಿರುವ ಸಂವತ್ಸರ ಫಲ, ರಾಜಾದಯಃ (ನವನಾಯಕರು ಮತ್ತು ಫಲ) ಉಪನಾಯಕರು, ಕಂದಾಯ, ಆದಾಯ – ವ್ಯಯ, ಮೇಘ ವಿಚಾರ, ಮಳೆಯ ಯೋಗ, ಸಂಕ್ರಾಂತಿ ಫಲ, ಚೈತ್ರ ಶುಕ್ಲ ಪ್ರಥಮಾ, ದ್ವಿತೀಯಾ ದಿನ ಶುದ್ಧಿ ಇತ್ಯಾದಿಗಳ ಪಠನ – ಶ್ರವಣಾನಂತರ ಯಸ್ಯಸ್ಮೃತ್ಯಾಚನಾಮೋಕ್ತ್ಯಾ ....... ಪರಿಪೂರ್ಣಂತದಸ್ತುಮೇ । ಪ್ರಾಯಶ್ಚಿತಾರ್ಥೇ ನಾಮತ್ರಯ ಸ್ಮರಣೆ । ಕಾಯೇನವಾಚಾ ....... ನಾರಾಯಣೇತಿ ಸಮರ್ಪಯಾಮಿ ।

ಎಂದು ಪೂಜಾ ವಿಧಿ ಸಂಪೂರ್ಣ ಮಾಡಬೇಕು. ತೀರ್ಥಪ್ರಸಾದಾನಂತರ ಬೇವು ಬೆಲ್ಲವನ್ನು

ಶತಾಯುರ್ವಜ್ರ ದೇಹಾಯ ಸರ್ವಸಂಪತ್ಕರಾಯಚ ।
ಸರ್ವಾರಿಷ್ಟವಿನಾಶಾಯ ನಿಂಬಕಂದಳ ಭಕ್ಷಣಂ ॥

(ಅಂದರೆ ನೂರು ವರ್ಷಗಳ ಆಯುಷ್ಯ, ಸಧೃಡ ಆರೋಗ್ಯ, ಸಕಲ ಸಂಪತ್ತುಗಳ ಪ್ರಾಪ್ತಿಗಾಗಿಯೂ, ಸಕಲಾರಿಷ್ಟ ನಿವಾರಣೆಗಾಗಿಯೂ ಬೇವು ಬೆಲ್ಲ ಸೇವನೆ ಮಾಡುತ್ತೇನೆ) ಎಂದು ಹೇಳಿ ಸೇವಿಸಬೇಕು.

### ಪಂಚಾಂಗ ಶ್ರವಣ ಫಲ

ಶ್ಲೋ॥ ಯಃಶೃಣೋತಿ ಮಧುಶುಕ್ಲಪಕ್ಷಕೇ ವರ್ಷನಾಥ ಸಚಿವಾದಿಕಂ ಫಲಂ ।
ಪ್ರಾಪ್ನುಯಾದ್ದುರಿತ ಮುಕ್ತವಿಗ್ರಹಃಶ್ಚ ಆಯುರರ್ಥಮತುಲಂ ಯಶಸ್ಸುಖಂ ॥
ಆಯುರ್ವೃದ್ಧಿಂ ಪುತ್ರಪೌತ್ರಾಭಿವೃದ್ಧಿಂ ನಿತ್ಯಾರೋಗ್ಯಂ ಸಂಪದಂ ಚಾನಪಾಯಾಂ ।
ಆಚ್ಛಿನಾನಾಮುತ್ಸವಾನಾಮವಾಪ್ತಿಂ ಯಚ್ಛಂತ್ಯೇತೇ ವತ್ಸರಾಧೀಶ ಮುಖ್ಯಾಃ ॥
ತಿಥೇಶ್ಚಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಂ
ನಕ್ಷತ್ರಾದ್ಧರತೇಪಾಪಂ ಯೋಗಾದ್ರೋಗ ನಿವಾರಣಂ
ಕರಣಾತ್ಕಾರ್ಯ ಸಿದ್ಧಿಂಚ ಪಂಚಾಂಗ ಫಲಮುತ್ತಮಂ ॥ ಶ್ರೀ ॥

ಎಂಬಂತೆ ಚೈತ್ರ ಶುಕ್ಲ ಪಕ್ಷದಲ್ಲಿ ಆ ವರ್ಷದ ರಾಜ, ಮಂತ್ರಿ ಮೊದಲಾದ ಪಂಚಾಂಗದಲ್ಲಿನ ಫಲಗಳನ್ನು ಯಾರು ಕೇಳುವರೋ ಅಂತಹವರು ಪಾಪಫಲಗಳಿಂದ ಮುಕ್ತರೂ, ದೀರ್ಘಾಯುಷ್ಯವಂತರೂ, ಐಶ್ವರ್ಯ ವಂತರೂ, ಕೀರ್ತಿವಂತರೂ, ಅತಿಶಯವಾದ ಸುಖಾನುಭವಿಗಳೂ, ಪುತ್ರಪೌತ್ರಭಿ ವೃದ್ಧಿಯುಳ್ಳವರೂ ಆಗುತ್ತಾರೆ. ತಿಥಿಯಿಂದ ಐಶ್ವರ್ಯ, ವಾರದಿಂದ ಆಯುರ್ವೃದ್ಧಿ, ನಕ್ಷತ್ರದಿಂದ ಪಾಪ ಪರಿಹಾರ, ಯೋಗದಿಂದ ರೋಗ ನಿವಾರಣೆ, ಕರಣದಿಂದ ಕಾರ್ಯಸಿದ್ಧಿ ಮೊದಲಾದ ಶುಭ ಫಲಗಳು ಪಂಚಾಂಗದಿಂದ ಲಭಿಸುತ್ತದೆ.

### ಮಂಗಳ ಶ್ಲೋಕ

ಬ್ರಾಹ್ಮಣ್ಯಂ ಪರಿಪಾಲಯಂತು ಮುಖಜಾಃಸ್ವೀಯಾರ್ನಸ್ಮರಂತೋನ್ವಯಾನ್ ।
ರಾಜಾನಃ ಪರಿಪಾಲಯಂತು ಪೃಥಿವೀಂ ಸತ್ಯೈಕಸಂಧಾಸ್ಸ್ವಯಂ ॥
ಸ್ವೇಸ್ವೇಕರ್ಮಣಿಸಕ್ತಿಮೇತ್ಯ ಕಪಟ ದ್ವೇಷೌ ತ್ಯಜಂತು ಪ್ರಜಾಃ
ಕಾಲೇವರ್ಷತುವಾರಿದಃ ಕ್ಷಿತಿತಲೆ ಸುಖ್ಯಂತು ಸರ್ವೇಜನಾಃ

॥ ಸರ್ವೇಷಾಂ ಸಮಸ್ತ ಸನ್ಮಂಗಳಾನಿ ಭವಂತು ॥

ಬ್ರಾಹ್ಮಣರು ಸತ್ಕರ್ಮಾಸಕ್ತರಾಗಲೀ, ಪ್ರಜಾಪಾಲಕರು ಸತ್ಯನಿಷ್ಠರಾಗಲೀ, ಎಲ್ಲ ಕುಲಗಳವರು ತಮ್ಮ ತಮ್ಮ ಕುಲಧರ್ಮಾಸಕ್ತರಾಗಿ, ವಂಚನೆ, ದ್ವೇಷಗಳನ್ನು ಬಿಟ್ಟು ಸೌಹಾರ್ದದಿಂದ ವರ್ತಿಸುವರಾಗಲೀ, ಸಕಾಲದಲ್ಲಿ ಸುವೃಷ್ಟಿ ಯುಂಟಾಗಲಿ, ಎಲ್ಲ ಜನರೂ ಸುಖಿಗಳಾಗಿ ಬಾಳಲಿ ಎಲ್ಲರಿಗೂ ಎಲ್ಲ ಸನ್ಮಂಗಳಗಳೂ ಲಭಿಸಲಿ. ॥ ಶ್ರೀಃ ॥

॥ ಶ್ರೀರಸ್ತು ॥

॥ ಶ್ರೀಲ-ಶ್ರೀಸೀ-ಶ್ರೀಪ-ಪ್ರಸೀದಂತು ॥



ಶ್ಲೋ॥ ವಾಗೀಶಾದ್ಯಾಸ್ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಸ್ಸ್ಯುಃ ತಂ ನಮಾಮಿ ಗಜಾನನಂ ॥ ೧ ॥
ಅಚಿಂತ್ಯಾವ್ಯಕ್ತ ರೂಪಾಯ ನಿರ್ಗುಣಾಯ ಗುಣಾತ್ಮನೇ ।
ಸಮಸ್ತ ಜಗದಾಧಾರ ಮೂರ್ತಯೇ ಬ್ರಹ್ಮಣೇ ನಮಃ ॥ ೨ ॥
ಕರದ್ವಯೇನ ಕಮಲೇ ಧಾರಯಂತೀಂ ಸ್ವಲೀಲಯಾ ।
ಹಾರನೂಪುರಸಂಯುಕ್ತಾಂ ಲಕ್ಷ್ಮೀಂದೇವೀಂ ನಮಾಮ್ಯಹಂ ॥ ೩ ॥
ಶರದಿಂದು ವಿಕಾಸಮಂದಹಾಸಾಂ ಸ್ಫುರದಿಂದೀವರ ಲೋಚನಾಭಿರಾಮಾಂ ।
ಅರವಿಂದ ಸಮಾನಸುಂದರಾಸ್ಯಾಂ ಅರವಿಂದಾಸನ ಸುಂದರೀಮುಪಾಸೇ ॥೪॥
ನಮಸ್ಸೂರ್ಯಾಯ ಚಂದ್ರಾಯ ಮಂಗಳಾಯ ಬುಧಾಯಚ ।
ಗುರುಶುಕ್ರಶನಿಭ್ಯಶ್ಚ ರಾಹವೇ ಕೇತವೇ ನಮಃ ॥ ೫ ॥

ಕುಲದೇವತಾ ಸ್ತುತಿ:

ಸತ್ಯಾದ್ರಿರಾಮಂ ಸರಸೀರುಹಾಕ್ಷಂ ನಾಸಾಮಣಿಂ ರಾಜಿತ ಶಂಖಚಕ್ರಂ ।
ಧನುರ್ಧರಂ ಸಾಯಕ ದಿವ್ಯಹಸ್ತಂ ನಮಾಮಿ ವಿಷ್ಣುಂ ಶಿರಸಾ ಚತುರ್ಭುಜಂ ॥ ೬ ॥

ಶ್ರೀಗುರು ನಮಸ್ಕಾರ:

ಯಶ್ಶಾಸ್ತ್ರ ವಿಜ್ಞಾನಮಯೀಂ ತೃತೀಯಾಂ ಧತ್ತೇದೃಶಂ ದರ್ಶಿತ ನೀಲಕಂಠಃ ।
ಲೋಕೇ ಸಮಸ್ತಾಸ್ತಿಕ ವಂದ್ಯಮೂರ್ತಿಃಜೀಯಾದ್ಗುರುಶ್ಶಂಕರ ಭಾರತೀಂದ್ರಃ ॥ ೭ ॥

ಪಂಚಾಂಗಕರ್ತೃ ವಿಚಾರ:

ಕರ್ಣಾಟೇಷ್ವಧಿ ಚಾಮರಾಜನಗರಂ ಶ್ರೀ ಚಾಮರಾಜೇಶ್ವರ ।
ಪ್ರೋದ್ಧೃತ್ತಸಂಸ್ಕೃತ ಪಾಠಶಾಲ ಮಹಿತಾಧ್ಯಕ್ಷೀಕೃತಸ್ಸಾಮಗಃ ॥
ಶ್ರೀಮಚ್ಚಾಮ ಮಹೀಪತೇ ಪ್ರವಿಲಸತ್ಸಂಸ್ಥಾನ ವಿದ್ವನ್ಮಣಿ ।
ಶ್ಯಾಸೀ ಜ್ಯೌತಿಷ ಶಾಸ್ತ್ರರತ್ನಮಿತಿಯಸ್ತಮ್ಮಯ್ಯಶಾಸ್ತ್ರೀ ದ್ವಿಜಃ ॥ ೮ ॥
ತಸ್ಯಾತ್ಮಜೋ ವೇಂಕಟಕೃಷ್ಣಶಾಸ್ತ್ರೀ ಸಿದ್ಧಾಂತ
ವಾಕ್ಯಾರ್ಯಭಟೀಯ ಮಾರ್ಗಾನ್ ।
ನವೀನ ದೃಕ್ಸಿದ್ಧಪಥಂ ವಿದಿತ್ವಾ ರರಾಜ ಧೀಮಾನ್ ಗಣಕಃ ಪ್ರಸಿದ್ಧಃ ॥ ೯ ॥
ಕೃಷ್ಣಶಾಸ್ತ್ರೀ ತನೂಜಾತಃ ರಾಮಕೃಷ್ಣಶ್ಚಮತ್ತಿತಾ
ವಿಶಾರದೋ ರಾಷ್ಟ್ರವಾಕ್ಯಾಂ ಸಿದ್ಧಾಂತೇಪಿ ಚ ವಿಶ್ರುತಃ ॥ ೧೦ ॥
ಜ್ಯೋತಿರ್ವಿದ್ಯಾಭಾಸ್ಕರಾದಿ ಬಿರುದಂ ವಿದ್ಯಯಾಪ್ತವಾನ್ ।
ದೈವಜ್ಞಮಣೀರಶ್ಯೇಷಃ ಜ್ಯೋತಿರ್ಭೂಷಣ ಕೀರ್ತಿಮಾನ್ ॥ ೧೧ ॥
ಜ್ಯೌತಿಶ್ಶಾಸ್ತ್ರ ವಾಚಸ್ಪತಿ ಸ್ತಥಾ ಜ್ಯೌತಿಷಕೇಸರೀ ।
ಜ್ಯೌತಿಷೇರತ್ನ ಬಿರುದಂ ಗಣಕತ್ವೇನ ಲಬ್ಧವಾನ್ ॥ ೧೨ ॥
ರಾಮಕೃಷ್ಣತನೂಜೋಹಂ ಕುಮಾರೇತಿ ಚ ವಿಶ್ರುತಃ ॥
ಜ್ಯೋತಿರ್ವಿದ್ಯಾರತ್ನಮಿತಿಖ್ಯಾತಃ ಜ್ಯೌತಿಷಕೇಸರೀ ॥ ೧೩ ॥
ಪ್ರಶಸ್ತಿಂಚಾಪಿಸಂಪಾದ್ಯ ಗುರೂನ್ನತ್ವಾತಿ ಭಕ್ತಿತಃ ।
ಸೂರ್ಯಸಿದ್ಧಾಂತಾರ್ಯಭಟ್ಟ ವಾಕ್ಯದೃಗ್ಗಣಿತಕ್ರಮೈಃ ॥ ೧೪ ॥
ಪುತ್ರ ಮನೋಹರಸ್ಯಚ ಸಾಹಾಯ್ಯಾದ್ಧತುಸಮ್ಮತಂ ।
ಶೋಭಕೃತ್ತಬ್ದ ಪಂಚಾಂಗಂ ಕರೋಮಿ ವಿದುಷಾಂ ಮುದೇ ॥ ೧೫ ॥

ಪ್ರಾರ್ಥನಾ

ಹಂಸೈರಿವ ಬುಧೈಸ್ಸರ್ವೈ ರಸವಿವಾತ್ರ ದುಗ್ಧವತ್ ।
ಕೃಪಯಾ ಸಂಗೃಹೀತವ್ಯ ಇತಿ ಸಂಪ್ರಾರ್ಥಯಾಮಹೇ ॥ ೧೬ ॥

ಪಂಚಾಂಗ ಪೀಠಿಕಾ

ಶ್ಲೋ. ಶ್ರೀ ಕಲ್ಯಾಣ ಗುಣಾವಹಂ ರಿಪುಹರಂ ದುಸ್ವಪ್ನ ದೋಷಾಪಹಂ ॥
ಗಂಗಾಸ್ನಾನ ವಿಶೇಷ ಪುಣ್ಯಫಲದಂ ಗೋದಾನತುಲ್ಯಂ ನೃಣಾಂ ॥
ಆಯುರ್ವೃದ್ಧಿದಮುತ್ತಮಂ ಶುಭಕರಂ ಸಂತಾನ ಸಂಪತ್ಪ್ರದಂ ।
ನಾನಾಕರ್ಮಸುಸಾಧನಂ ಸಮುಚಿತಂ ಪಂಚಾಂಗಮಾಕರ್ಣ್ಯತಾಂ ॥ ೧ ॥
ವರ್ಷಾದಾವುಷಸಿಸ್ಮರನ್ಪ್ರಪಾಪತಿಂ ಚೋತ್ಥಾಯ ಚಂದ್ರಸ್ವರೇ ।
ವೃದ್ಧಾಶೀರನುಗೃಹ್ಯ ನಿಂಬಕದಳಂ ಪ್ರಾಶ್ಯಾಜ್ಯಪಾತ್ರೇ ಸ್ಥಿತಂ ॥
ವಕ್ತ್ರಂ ವೀಕ್ಷ್ಯ ಚ ದರ್ಪಣೇನ ಚ ತಥಾಸನ್ಮಿತ್ರವರ್ಗೈಸ್ಸಮಂ ।
ದೈವಜ್ಞಸ್ಸಭಾಂ ಪ್ರವಿಶ್ಯ ಸುಜನಾನ್ಸ್ವಾರ್ಷಂ ಫಲಂ ಶ್ರಾವಯೇತ್ ॥ ೨ ॥

ಅಸ್ಯ ಸಂವತ್ಸರಸ್ಯ ಬ್ರಹ್ಮಣಃ ಕಲ್ಪಾದಿ ಗತಾಬ್ದಾಃ ೧೯೭,೨೯,೪೯,೧೨೪ ಜಗತ್ ಸೃಷ್ಟ್ಯಾದಿ ಗತ ಸೌರಾಬ್ದಾಃ ೧೯೫,೫೮,೮೫,೧೨೪ ಸ್ವಾಯಂಭುವ ಮನುಗತಾಬ್ದಾಃ ೧೬೬,೪೫,೦೧,೧೨೪ ವೈವಸ್ವತ ಮನುಗತಾಬ್ದಾಃ ೧,೮೬,೧೮,೮೬೪ ಗತಕಲ್ಯಬ್ದಾಃ ೫೧೨೪. ಶಾಲಿವಾಹನ ಶಕಗತಾಬ್ದಾಃ ೧೯೪೫ ವಿಕ್ರಮ ಶಕಗತಾಬ್ದಾಃ ೨೦೭೯-೮೦ ವರ್ತಮಾನ ಹೂಣಶಕಾಬ್ದಾಃ 2023-24 ವರ್ತಮಾನ ಫಸಲಿ ೧೪೩೨-೩೩ ವರ್ತಮಾನ ಗಾಂಧಿಶಕ ೭೪ ವರ್ದಮಾನ ಶಕಾಬ್ದಾಃ ೨೫೪೯-೫೦ ಕೊಲ್ಲಂ ೧೧೯೮-೯೯ ಭಾರತ ರಾಷ್ಟ್ರೀಯ ಪಂಚಾಂಗರೀತ್ಯಾ ಮಧ್ಯಮ ಧನಾಯನಾಂಶ ಭಾಗಾದಿ 24-11-11 ಚೈತ್ರ ಶುಕ್ಲ ಪ್ರಥಮ ಸೌಮ್ಯವಾಸರಮಾರಭ್ಯ ಗತಕಲಿ ದಿನಾನಿ 1871560

ಅಥಾಸ್ಮಿ ದೇಶೇ ಲೋಕವ್ಯವಹಾರಾರ್ಥಂ ಚಾಂದ್ರಸೌರ ಮಾನಾಬ್ದೌಗ್ರಾಹ್ಯೌ । ಚಾಂದ್ರಮಾನೇನ ಚೈತ್ರ ಶುಕ್ಲ ಪ್ರಥಮಾ ಸೌಮ್ಯವಾಸರಮಾರಭ್ಯ ಶ್ರೀ ಶೋಭಕೃನ್ನಾಮ ಸಂವತ್ಸರಃ । ಸೌರಮಾನೇನ ಚೈತ್ರ ಕೃಷ್ಣ ನವಮ್ಯಾಂ ಭೃಗುವಾಸರಮಾರಭ್ಯ ಶೋಭಕೃನ್ನಾಮ ಸಂವತ್ಸರಃ । ಬಾರ್ಹಸ್ಪತ್ಯಮಾನೇನ ನಳನಾಮ ಸಂವತ್ಸರಃ ಸರ್ವತ್ರ ಗುರೂದಯವಶಾತ್ ಆಶ್ವಯುಜಾಬ್ದಃ ।

ಟೀಕು : ಈ ನಮ್ಮ ಭರತಖಂಡದಲ್ಲಿ ಚಾಂದ್ರಸೌರ ಮಾನಗಳೆರಡೂ ಬಳಕೆಯಲ್ಲಿವೆ. ಚಾಂದ್ರಮಾನ ರೀತಿಯಾಗಿ ಚೈತ್ರ ಶುಕ್ಲ ಪ್ರಥಮಾ ಬುಧವಾರ ಮೊದಲೂ, ಸೌರಮಾನ ರೀತಿಯಾಗಿ ಚೈತ್ರ ಕೃಷ್ಣ ನವಮೀ ಶುಕ್ರವಾರ ಮೊದಲೂ ಶ್ರೀಶೋಭಕೃನ್ನಾಮ ಸಂವತ್ಸರವು. ಬಾರ್ಹಸ್ಪತ್ಯಮಾನ ರೀತಿ ವಿಂಧ್ಯೋತ್ತರ ದೇಶಕ್ಕೆ ನಳನಾಮ ಸಂವತ್ಸರವು. ಗುರೂದಯವಶದಿಂದ ಎಲ್ಲ ಕಡೆಗಳಲ್ಲೂ ಆಶ್ವಯುಜನಾಮ ಸಂವತ್ಸರವು.

## ಸಂವತ್ಸರತ್ರಯ ಫಲಂ :

ಶ್ರೀ ಶೋಭಕೃನ್ನಾಮ ಸಂವತ್ಸರ ಫಲಂ :

ಶ್ಲೋ ॥ ಶೋಭಕೃದ್ವತ್ಸರೇ ಸರ್ವಸಸ್ಯಾನಾಮಭಿವೃದ್ಧಯಃ ।
ನೃಪಾಣಾಂಸ್ನೇಹಮನ್ಯೋನ್ಯಂ ಪ್ರಜಾನಾಂಚಪರಸ್ಪರಂ ॥

ಟೀ ॥ ಶೋಭಕೃನ್ನಾಮ ಸಂವತ್ಸರದಲ್ಲಿ ಎಲ್ಲಾ ಸಸ್ಯಗಳೂ ಅಭಿವೃದ್ಧಿ ಹೊಂದುತ್ತವೆ. ರಾಜರುಗಳಲ್ಲಿಯೂ ಪ್ರಜೆಗಳಲ್ಲಿಯೂ ಅನ್ಯೋನ್ಯ ಸ್ನೇಹವಿರುತ್ತದೆ.

ಶ್ರೀ ನಳನಾಮ ಸಂವತ್ಸರ ಫಲಂ :

ಶ್ಲೋ ॥ ನಳಾಬ್ದೇ ಮಧ್ಯಸಸ್ಯಾರ್ಘವೃಷ್ಟಯಃ ಪ್ರಚುರಾಗದಾಃ ॥
ನೃಪಸಂಕ್ಷೋಭ ಸಂಜಾತ ಭೂರಿ ಭೀಕರ ಭೂಮಯಃ ॥

ಟೀ ॥ ನಳನಾಮ ಸಂವತ್ಸರದಲ್ಲಿ ಸಸ್ಯಗಳ ಬೆಳವಣಿಗೆಯೂ, ಮಳೆಯೂ, ಪದಾರ್ಥಗಳ ಬೆಲೆಯೂ ಮಧ್ಯಮವಾಗಿರುತ್ತದೆ. ರೋಗಾದಿಗಳ ಉಪದ್ರವ ಹೆಚ್ಚಾಗಿರುತ್ತದೆ. ರಾಜಕ್ಷೋಭವೂ, ಅಗ್ನಿಭಯವೂ ಉಂಟಾಗುತ್ತವೆ.

ಆಶ್ವಯುಜಾಬ್ದ ಫಲಂ :

ಶ್ಲೋ ॥ ಅಬ್ದೇಪ್ಯಾಶ್ವಯುಜೇ ಯುದ್ಧಂ ಸುಖಿನಸ್ಸರ್ವಜಂತವಃ ।
ಮಧ್ಯಮಂ ಪೂರ್ವಸಸ್ಯಂಚ ಸಂಪೂರ್ಣಮಪರಂಫಲಂ ॥

ಟೀ ॥ ಆಶ್ವಯುಜನಾಮ ಸಂವತ್ಸರದಲ್ಲಿ ರಾಜರುಗಳಲ್ಲಿ ಪರಸ್ಪರ ಯುದ್ಧಭೀತಿಯಿರುತ್ತದೆ. ಪ್ರಾಣಿಗಳು ಸೌಖ್ಯವಾಗಿರುತ್ತವೆ. ಕಾರುಬೆಳೆ ಫಸಲು ಮಧ್ಯಮವಾಗಿರುತ್ತದೆ. ಹೈನುಬೆಳೆ ಫಸಲು ಚೆನ್ನಾಗಿ ಆಗುತ್ತದೆ.

## ರಾಜಾದಯ:

(ನವನಾಯಕರು ಮತ್ತು ಫಲ - ಸೂರ್ಯಸಿದ್ಧಾಂತ ಗಣಿತ ರೀತ್ಯಾ)

| | | |
|---|---|---|
| ರಾಜಾ - ಬುಧ | ಸಸ್ಯಾಧಿಪ - ಚಂದ್ರ | ಮೇಘಾಧಿಪ - ಗುರು |
| ಮಂತ್ರಿ - ಶುಕ್ರ | ಧಾನ್ಯಾಧಿಪ - ಶನಿ | ರಸಾಧಿಪ - ಬುಧ |
| ಸೇನಾಧಿಪ - ಗುರು | ಅರ್ಘಾಧಿಪ - ಗುರು | ನೀರಸಾಧಿಪ - ಚಂದ್ರ |

ಪಶುನಾಯಕ - ಬಲರಾಮ

1. ಬುಧಸ್ಯರಾಜತ್ವ ಫಲಂ :

ಶ್ಲೋ ॥ ಪ್ರಭೂತವಾಯುರ್ಘವಿಮಧ್ಯವೃಷ್ಟಿಃ । ಗದಾಹತಾಃಪ್ರೋದ್ಧತ ರಾಜಕೋಪಃ ॥
ಬುಧೇಬ್ದನಾಥೇಷ್ವಪರಂಚ ಸಸ್ಯಂ । ಶ್ರೇಷ್ಠಂಚವೃದ್ಧಿರ್ಲಿಪಿಲೇಖಕಾನಾಂ ॥

ಟೀ ॥ ಬುಧನು ರಾಜನಾಗಿರುವುದರಿಂದ ಗಾಳಿ ಹೆಚ್ಚು, ಮಳೆ ಕಡಿಮೆ. ಪ್ರಜೆಗಳಿಗೆ ರೋಗವೂ, ರಾಜಕೋಪವೂ ಉಂಟಾಗುತ್ತವೆ. ಹೈನುಬೆಳೆ ಚೆನ್ನಾಗಿ ಆಗುತ್ತದೆ. ಲಿಪಿಲೇಖಕರಿಗೆ ವೃದ್ಧಿಯುಂಟಾಗುವುದು.

2. ಶುಕ್ರಸ್ಯ ಮಂತ್ರಿತ್ವ ಫಲಂ :

ಶ್ಲೋ ॥ ಸ್ತ್ರೀಪುಮಾಂಸೋಸ್ವದಾಪ್ರೀತಿಃ ಫಲಿತಾವೃಕ್ಷಜಾತಯಃ ।
ಭವಂತಿಗಾವಸ್ಸುದುಘಾಜಾಯತೇ ಶುಕ್ರಮಂತ್ರಿತಃ ॥

ಟೀ ॥ ಶುಕ್ರನು ಮಂತ್ರಿಯಾಗಿರುವುದರಿಂದ ಸ್ತ್ರೀಪುರುಷರಲ್ಲಿ ಅನ್ಯೋನ್ಯ

ಪ್ರೀತಿಯುಂಟಾಗುವುದು. ಗೋವುಗಳು ಹೆಚ್ಚಾಗಿ ಹಾಲನ್ನು ಕೊಡುತ್ತವೆ. ವೃಕ್ಷಗಳು ಹೆಚ್ಚಾಗಿ ಫಲಿಸುತ್ತವೆ.

### 3. ಗುರೋಃ ಸೇನಾಧಿಪತ್ವಫಲಂ :

ಶ್ಲೋ ॥ ಸೇನಾಧಿಪೇದೇವಗುರೌಧರಿತ್ರ್ಯಾಂ । ಸುವೃಷ್ಟಿರತ್ಯಂತ ಜನಾನುರಾಗಃ ॥
ದೇವೋತ್ಸವಾಭೂಸುರಯಜ್ಞಕರ್ಮ । ರಾಜಾಪ್ರಜಾರಂಜನತತ್ಪರಸ್ಸ್ಯಾತ್ ॥

ಟೀ ॥ ಗುರು ಸೇನಾಧಿಪತಿಯಾಗಿರಲಾಗಿ ಒಳ್ಳೆಯ ಮಳೆಯಾಗುತ್ತದೆ. ಪ್ರಜೆಗಳು ಪರಸ್ಪರ ಪ್ರೀತಿಯುಳ್ಳವರಾಗಿರುತ್ತಾರೆ. ದೇವೋತ್ಸವಗಳು ನಡೆಯುತ್ತವೆ. ಜನರು ಸ್ವಕರ್ಮನಿರತರಾಗಿರುತ್ತಾರೆ. ರಾಜರು ಪ್ರಜೆಗಳಿಗೆ ಸಂತೋಷವನ್ನುಂಟು ಮಾಡುತ್ತಾರೆ.

### 4. ಚಂದ್ರಸ್ಯ ಸಸ್ಯಾಧಿಪತ್ವ ಫಲಂ :

ಶ್ಲೋ ॥ ಜಲಧಾನ್ಯಾನಿ ಸರ್ವಾಣಿ ಸ್ಥಲಧಾನ್ಯಾನಿ ಯಾನಿಚ ।
ಪಾಂಡುಭೂಮಿಸ್ತು ಫಲಿತಾ ಚಂದ್ರೇಸಸ್ಯಾಧಿಪೇ ಸತಿ ॥

ಟೀ ॥ ಚಂದ್ರನು ಸಸ್ಯಾಧಿಪತಿಯಾಗಿರುವುದರಿಂದ ತರೀ ಮತ್ತು ಖುಷ್ಕೀ ಭೂಮಿಗಳಲ್ಲಿ ಬೆಳೆಯತಕ್ಕ ಧಾನ್ಯಗಳು ಚೆನ್ನಾಗಿ ಬೆಳೆಯುತ್ತವೆ. ಬೂದು ಮಣ್ಣಿನ ಭೂಮಿಯಲ್ಲಿ ಬೆಳೆಗಳು ಚೆನ್ನಾಗಿ ಫಲಿಸುತ್ತವೆ.

### 5. ಶನೇಃ ಧಾನ್ಯಾಧಿಪತ್ವ ಫಲಂ :

ಶ್ಲೋ ॥ ಕೃಷ್ಣಧಾನ್ಯಾನಿಸರ್ವಾಣಿ ಸೂಕ್ಷ್ಮಧಾನ್ಯಾನಿಯಾನಿಚ ।
ಕೃಷ್ಣಭೂಮಿಸ್ತುಫಲಿತಾ ಮಂದೇಧಾನ್ಯಾಧಿಪೇಸತಿ ॥

ಟೀ ॥ ಶನಿಯು ಧಾನ್ಯಧಿಪತಿಯಾಗಿರುವುದರಿಂದ ಕಪ್ಪು ಧಾನ್ಯಗಳೂ, ಸಣ್ಣ ಸಣ್ಣ ಧಾನ್ಯಗಳು ಚೆನ್ನಾಗಿ ಫಲಿಸುತ್ತವೆ. ಕಪ್ಪು ಮಣ್ಣಿನ ಭೂಮಿಯಲ್ಲಿ ಚೆನ್ನಾಗಿ ಬೆಳೆಯಾಗುತ್ತದೆ.

### 6. ಗುರೋಃ ಅರ್ಘಾಧಿಪತ್ವ ಫಲಂ :

ಶ್ಲೋ ॥ ಸುವೃಷ್ಟಿಭಿರ್ಧಾನ್ಯಧನೈರ್ವಿರಾಜಿತಾ ।
ಭೂಮಿರ್ಮಹಾಯಜ್ಞಪರಾಮಹೀಸುರಾಃ ॥
ನಿತ್ಯೋತ್ಸವಾಮಂಗಳತೂರ್ಯನಿಸ್ಸನೈಃ ।
ಅರ್ಘಾಧಿಪೇದೇವಗುರುಸ್ಸುಭಿಕ್ಷಕೃತ್ ॥

ಟೀ ॥ ಗುರುವು ಅರ್ಘಾಧಿಪತಿಯಾಗಿರುವುದರಿಂದ ಸುವೃಷ್ಟಿಯೂ, ಧನಧಾನ್ಯ ಸಮೃದ್ಧಿಯೂ ಉಂಟಾಗುತ್ತದೆ. ಜನರು ಕರ್ಮನಿಷ್ಠರಾಗಿರುತ್ತಾರೆ. ಎಲ್ಲ ಕಡೆಗಳಲ್ಲೂ ಮಂಗಳಘೋಷದೊಡನೆ ಸಂತೋಷ ಸೂಚಕವಾದ ಉತ್ಸವಗಳು ನಡೆಯುತ್ತವೆ.

### 7. ಗುರೋಃ ಮೇಘಾಧಿಪತ್ವ ಫಲಂ :

ಶ್ಲೋ ॥ ಸಸ್ಯಾರ್ಘವೃಷ್ಟಿಭಿಸ್ತುಷ್ಟಾ ಭವೇದ್ಧಾತ್ರೀ ನಿರಂತರಾ ॥
ಹೀತರೋಗಭಯಾಸ್ಸರ್ವೇ ಗುರೌಮೇಘಾಧಿಪೇ ಸತಿ ॥

ಟೀ ॥ ಗುರುವು ಮೇಘಾಧಿಪತಿಯಾಗಿರಲಾಗಿ ಭೂಮಿಯು ಪೈರುಪಚ್ಚೆಗಳಿಂದ ತುಂಬಿರುತ್ತದೆ. ಪದಾರ್ಥಗಳಿಗೆ ಬೆಲೆ ಸ್ವಲ್ಪ ಕಡಿಮೆಯಾಗುತ್ತದೆ. ಮಳೆ ಚೆನ್ನಾಗಿ ಆಗುತ್ತದೆ. ಜನರು ರೋಗಭಯವಿಲ್ಲದವರಾಗಿರುತ್ತಾರೆ.

### 8. ಬುಧಸ್ಯ ರಸಾಧಿಪತ್ವ ಫಲಂ :

ಶ್ಲೋ ॥ ಶಶಿತನಯೇರಸನಾಥೇ ಪಿಪ್ಪಲಿಶುಂಠಿಹಿಂಗುಲಶುನಾನಿ ॥
ಘೃತತೈಲಾದ್ಯಖಿಲಂ । ದುರ್ಲಭಮಿಕ್ಷೂದವಂಸಕಲಂ ॥

ಟೀ ॥ ಬುಧನು ರಸಾಧಿಪತಿಯಾಗಿರುವುದರಿಂದ ಹಿಪ್ಪಲಿ, ಶುಂಠಿ, ಇಂಗು, ಬೆಳ್ಳುಳ್ಳಿ, ತುಪ್ಪ, ಎಣ್ಣೆ, ಬೆಲ್ಲ, ಸಕ್ಕರೆ ಇವುಗಳ ಬೆಲೆಯು ಹೆಚ್ಚಾಗುವುದು.

### 9. ಚಂದ್ರಸ್ಯ ನೀರಸಾಧಿಪತ್ವ ಫಲಂ :

ಶ್ಲೋ ॥ ಶುಕ್ಲವರ್ಣಾದಿಕಾನಾಂಚಮುಕ್ತಾರಜತವಾಸಸಾಂ ।
ವೃದ್ಧಯೋರ್ಘೇಣಜಾಯಂತೇ ಚಂದ್ರೇನೀರಸನಾಯಕೇ ॥

ಟೀ ॥ ಚಂದ್ರನು ನೀರಸನಾಯಕನಾಗಿರುವುದರಿಂದ ಬೆಳ್ಳಿ ಮೊದಲಾದ ಲೋಹಗಳು, ವಸ್ತ್ರಾಭರಣಾದಿಗಳು ವೃದ್ಧಿಯಾಗುತ್ತವೆ.

### ಬಲರಾಮಸ್ಯ ಪಶುನಾಯಕತ್ವ ಫಲಂ :

ಶ್ಲೋ ॥ ಸುವೃಷ್ಟಿಸ್ಸರ್ವದೇಶೇಷು । ಸರ್ವಸಸ್ಯಸಮೃದ್ಧಯಃ ॥
ಪಶವೋ ರೋಗರಹಿತಾ । ರಾಮಶ್ಚೇತ್ಪಶುನಾಯಕಃ ॥

ಟೀ ॥ ಬಲರಾಮನು ಪಶುನಾಯಕನಾಗಿರುವುದರಿಂದ ಸುವೃಷ್ಟಿಯೂ, ಸಸ್ಯಸಮೃದ್ಧಿಯೂ ಉಂಟಾಗಿ ಪಶುಗಳು ರೋಗರಹಿತವಾಗಿರುತ್ತವೆ.

(ಷರಾ : ಚಿರಂತನತ್ವಾತ್ ಶ್ಲೋಕೇಷು ಶಬ್ದಸೌಷ್ಠವಂ ನಮೃಗ್ಯಂ )

### ಉಪನಾಯಕರು

ರವಿ – ಛತ್ರಾಧಿಪ.
ಚಂದ್ರ – ಪೂರ್ವಸಸ್ಯಾಧಿಪ, ಅಗ್ರಧಾನ್ಯಾಧಿಪ, ನರಾಧಿಪ, ಕೋಶಾಧಿಪ, ಉಷ್ಟ್ರಾಧಿಪ, ಖರಾಧಿಪ.
ಕುಜ – ವ್ಯವಹಾರಾಧಿಪ, ವಸ್ತ್ರಾಧಿಪ.
ಬುಧ – ಅಶ್ವಾಧಿಪ, ಮಹಿಷಾಧಿಪ, ಮಾಂಗಲ್ಯಾಧಿಪ.
ಗುರು – ಯುದ್ಧಾಧಿಪ, ವ್ಯಾಪಾರಾಧಿಪ, ಧನಾಧಿಪ, ರತ್ನಾಧಿಪ, ತೃಣಾಧಿಪ, ಮೇಘಾಧಿಪ.
ಶುಕ್ರ – ಅಪರಸಸ್ಯಾಧಿಪ, ಆಜ್ಯಾಧಿಪ, ಸರ್ಪಾಧಿಪ, ಸ್ತ್ರೀಣಾಮಧಿಪ, ಗಜಾಧಿಪ.
ಶನಿ – ಪಶ್ಚಾದ್ಧಾನ್ಯಾಧಿಪ, ಮೃಗಾಧಿಪ, ವೃಷಭಾಧಿಪ, ಗವಾಮಧಿಪ.

### ಕಂದಾಯ ವಿಚಾರ

ಕಂದಾಯ ಫಲ : ಕಂದಾಯದ ಸಂಖ್ಯೆಯು ಹೆಚ್ಚಿದಷ್ಟೂ ಫಲ ಹೆಚ್ಚು. ಬೆಸನಾದರೆ ದ್ರವ್ಯಲಾಭ. ಸಮವಾದರೆ ಮಧ್ಯಮ. ಸೊನ್ನೆಯಾದರೆ ನಿಷ್ಫಲ. ಮೊದಲನೆ ಕಂದಾಯವು ಸೊನ್ನೆಯಾದರೆ ರೋಗಭಯ. ಎರಡನೆಯದು ಸೊನ್ನೆಯಾದರೆ ಮಹಾಭಯ. ಮೂರನೆಯದು ಸೊನ್ನೆಯಾದರೆ ಧನಹಾನಿ. ಮೂರೂ ಸೊನ್ನೆಯಾದರೆ ಮಹಾಕಷ್ಟ. ಮೊದಲನೆ ಕಂದಾಯವು ಚೈತ್ರಾದಿ ೪ ತಿಂಗಳೂ, ಎರಡನೇ ಕಂದಾಯವು ಶ್ರಾವಣ ಮೊದಲು ೫ ತಿಂಗಳೂ, ಮೂರನೇ ಕಂದಾಯವು ಮಾರ್ಗಶಿರ ಮೊದಲು ೪ ತಿಂಗಳೂ ಫಲವನ್ನು ಕೊಡುತ್ತದೆ.

| ನಕ್ಷತ್ರ | ಪ್ರ | ದ್ವಿ | ತೃ | ನಕ್ಷತ್ರ | ಪ್ರ | ದ್ವಿ | ತೃ | ನಕ್ಷತ್ರ | ಪ್ರ | ದ್ವಿ | ತೃ |
|---|---|---|---|---|---|---|---|---|---|---|---|
| ಅಶ್ವಿ | 1 | 1 | 1 | ಮಖೆ | 4 | 1 | 3 | ಮೂಲ | 7 | 1 | 0 |
| ಭರ | 4 | 2 | 4 | ಪೂಫ | 7 | 2 | 1 | ಪೂಷಾ | 2 | 2 | 3 |
| ಕೃತ್ತಿ | 7 | 0 | 2 | ಉಫ | 2 | 0 | 4 | ಉಷಾ | 5 | 0 | 1 |
| ರೋಹಿ | 2 | 1 | 0 | ಹಸ್ತ | 5 | 1 | 2 | ಶ್ರವ | 0 | 1 | 4 |
| ಮೃಗ | 5 | 2 | 3 | ಚಿತ್ತೆ | 0 | 2 | 0 | ಧನಿ | 3 | 2 | 2 |
| ಆರ್ದ್ರೆ | 0 | 0 | 1 | ಸ್ವಾತಿ | 3 | 0 | 3 | ಶತ | 6 | 0 | 0 |
| ಪುನ | 3 | 1 | 4 | ವಿಶಾ | 6 | 1 | 1 | ಪೂಭಾ | 1 | 1 | 3 |
| ಪುಷ್ಯ | 6 | 2 | 2 | ಅನೂ | 1 | 2 | 4 | ಉಭಾ | 4 | 2 | 1 |
| ಆಶ್ಲೇ | 1 | 0 | 0 | ಜ್ಯೇ | 4 | 0 | 2 | ರೇವ | 7 | 0 | 4 |

ಪ್ರ = ಪ್ರಥಮ ಕಂದಾಯ. ದ್ವಿ = ದ್ವಿತೀಯ ಕಂದಾಯ
ತೃ = ತೃತೀಯಾ ಕಂದಾಯ

### ಅಥವರ್ಷಧಾನ್ಯಾದಯಃ (ಪೂರ್ಣಾಂಕ 20)

| | | | | | | | |
|---|---|---|---|---|---|---|---|
| ವರ್ಷಂ | 5 | ಜನನಂ | 15 | ಘನಘರ್ಜಿತಂ | 0 | ರಸಃ | 9 |
| ಧಾನ್ಯಂ | 11 | ಮರಣಂ | 11 | ಅತಿವೃಷ್ಟಿಃ | 1 | ಕ್ಷುಧಾ | 17 |
| ಶೀತಂ | 5 | ದೇಶೋಪದ್ರವ | 13 | ಅನಾವೃಷ್ಟಿಃ | 13 | ತೃಷ್ಣಾ | 1 |
| ತೃಣಂ | 13 | ದೇಶಸ್ವಾಸ್ಥ್ಯಂ | 13 | ಮೂಷಕಾಃ | 3 | ನಿದ್ರಾ | 13 |
| ಉಷ್ಣಃ | 17 | ಚೋರಭಯಂ | 9 | ಶಲಭಃ | 13 | ಆಲಸ್ಯಂ | 13 |
| ಮಾರುತಃ | 13 | ಚೋರನಾಶಃ | 3 | ಶುಕಃ | 7 | ಉದ್ಯೋಗ | 7 |
| ಪ್ರಜಾವೃದ್ಧಿ | 15 | ಅಗ್ನಿಬಾಧಾ | 11 | ಸ್ವಚಕ್ರಂ | 13 | ಶಾಂತಿಃ | 13 |
| ಪ್ರಜಾಕ್ಷಯ | 15 | ತಚ್ಛಾಂತಿಃ | 3 | ಪರಚಕ್ರಂ | 1 | ಕೋಪಃ | 5 |
| ರಾಜವಿಡ್ವರಂ | 11 | ದುಷ್ಟನಿಗ್ರಹಃ | 3 | ಸುವರ್ಣಂ | 3 | ದಂಭಃ | 13 |
| ಉಗ್ರಂ | 5 | ಶಿಷ್ಟಪಾಲನಂ | 3 | ರಜತಂ | 9 | ಮಿತ್ರತ್ವಂ | 17 |
| ಪುಣ್ಯಂ | 5 | ಪ್ರಾಣಿಸೌಖ್ಯಂ | 3 | ತಾಮ್ರಂ | 3 | ಮಿತ್ರಭೇದಃ | 1 |
| ಪಾಪಂ | 5 | ಪ್ರಾಣಿದುಃಖಂ | 11 | ಕಾಂಸ್ಯಂ | 11 | ರಸನಿಷ್ಪತ್ತಿಃ | 1 |
| ವ್ಯಾಧಿಃ | 3 | ಮಹೋತ್ಪಾತಃ | 11 | ಲೋಹಂ | 15 | ಫಲನಿಷ್ಪತ್ತಿಃ | 1 |
| ತಚ್ಛಾಂತಿಃ | 9 | ನೈಷ್ಟಿಕಂ | 3 | ಅಯಃ | 11 | ಉತ್ಸಾಹಃ | 1 |
| ಆಚಾರಃ | 3 | ವಿದ್ಯುತ್ | 7 | ತ್ರಪುಃ | 13 | | |
| ದುರಾಚಾರಃ | 11 | ಶಿಲಾವರ್ಷಂ | 3 | ಸೀಸಃ | 13 | | |

### ಮೇಘ ವಿಚಾರಃ

ವತ್ಸರೇಸ್ಮಿನ್ ವರುಣನಾಮಕ ಮೇಘಃ । ಮೇರೋಃ ನೈಋತ್ಯ ದಿಗ್ಭಾಗೇ ಮೇಘೋತ್ಪತ್ತಿಃ ।

ಮೇಘಫಲಂ :

ಶ್ಲೋ ॥ ಏಕಾರ್ಣವಂ ಮಹಾಘೋರಂ ವರ್ಷಂವಾಯುಸಮನ್ವಿತಂ ।
ವರುಣೋನಾಮ ಮೇಘೋಸೌಸಮುದ್ರಾಂತಂ ಪ್ರವರ್ಷತಿ ॥

ಅಸ್ಮಿನ್ನಬ್ದೇ ತ್ವಾಢಕ ಪರಿಮಿತಂ ವರ್ಷಂ। ಆಢಕ ಚತುಷ್ಟಯ ಪರಿಮಿತೋ ವಾಯುಃ.

ಆಢಕ ಪ್ರಮಾಣಂತು :

ಶ್ಲೋ ॥ ಷಷ್ಟಿಯೋಜನ ವಿಸ್ತೀರ್ಣಂ ಶತಯೋಜನಮುನ್ನತಂ।
ಆಢಕಸ್ಯ ಪ್ರಮಾಣಂತು ದೇವ ಮಾನೇನ ನಿರ್ಮಿತಂ ॥

ಅಥ ವರ್ಷ ವಿಭಾಗಃ :

ಶ್ಲೋ ॥ ದಶಭಾಗಾಸ್ಸಮುದ್ರೇಷು ಷಡ್ಭಾಗಾಃ ಪರ್ವತೇಷುಚ।
ಭೂಮೌತು ಭಾಗಾಶ್ಚತ್ವಾರೋ ವಾಸವೇನ ವಿನಿಶ್ಚಿತಾಃ ॥

ಟೀ ॥ ಈ ವರ್ಷ ವರುಣನಾಮಕ ಮೇಘವು ಮೇರುವಿನ ನೈಋತ್ಯ ದಿಕ್ಕಿನಲ್ಲಿ ಹುಟ್ಟಿ ಗಾಳಿಯಿಂದ ಕೂಡಿ ಹೆಚ್ಚಾದ ಮಳೆಯನ್ನು ಸುರಿಸುತ್ತದೆ. ಮಳೆ 3 ಕೊಳಗ. ಗಾಳಿ 4 ಕೊಳಗ. ಕೊಳಗವು 60 ಗಾವುದ ವಿಸ್ತೀರ್ಣವುಳ್ಳದ್ದಾಗಿಯೂ 100 ಗಾವುದ ಎತ್ತರ ಉಳ್ಳದ್ದಾಗಿಯೂ ಇರುತ್ತದೆ. ಮಳೆಯ ಒಟ್ಟು 20 ಭಾಗಗಳಲ್ಲಿ 10 ಭಾಗ ಸಮುದ್ರದಲ್ಲೂ, 6 ಭಾಗ ಪರ್ವತಗಳಲ್ಲೂ, ಉಳಿದ 4 ಭಾಗ ಭೂಮಿಯ ಮೇಲೂ ಬೀಳುತ್ತದೆ.

## ಆದಾಯ – ವ್ಯಯಾದಿಗಳು

| ರಾಶಿ | ಆದಾಯ | ವ್ಯಯ | ಆರೋಗ್ಯ | ಅನಾರೋಗ್ಯ | ರಾಜಪೂಜ್ಯ | ರಾಜಕೋಪ | ಸುಖ | ದುಃಖ |
|---|---|---|---|---|---|---|---|---|
| ಮೇಷ – ವೃಶ್ಚಿಕ | 5 | 5 | 1 | 1 | 4 | 2 | 6 | 3 |
| ವೃಷಭ – ತುಲಾ | 14 | 11 | 5 | 2 | 3 | 5 | 6 | 3 |
| ಮಿಥುನ – ಕನ್ಯಾ | 2 | 11 | 0 | 6 | 0 | 5 | 6 | 3 |
| ಕರ್ಕಾಟಕ | 2 | 2 | 4 | 6 | 5 | 6 | 3 | 3 |
| ಸಿಂಹ | 14 | 2 | 2 | 5 | 1 | 2 | 6 | 3 |
| ಧನುಸ್ಸು – ಮೀನ | 8 | 11 | 6 | 6 | 0 | 5 | 6 | 3 |
| ಮಕರ – ಕುಂಭ | 11 | 5 | 0 | 4 | 4 | 2 | 6 | 3 |

## ರವಿಚಾರ ಫಲಂ :

ಮೇಷ ಸಂಕ್ರಾಂತಿ ಫಲಂ :

ವತ್ಸರೇಸ್ಮಿನ್ ಚೈತ್ರ ಕೃಷ್ಣ ನವಮ್ಯಾಂ ಭಾರ್ಗವವಾಸರೇ (ತಾ ॥ 14-04-2023) ದಿವಾ ೨೬-೩೬ ಘಟೀ ಸಮಯೇ ರವೇಃ ನಿರಯಣ ಮೇಷರಾಶಿ ಪ್ರವೇಶಾತ್ತತ್ಫಲಂ.

ಶ್ಲೋ ॥ ದಿವಾಚೇನ್ಮೇಷ ಸಂಕ್ರಾಂತಿರನರ್ಘಕಲಹ ಪ್ರದಾ ॥

ಟೀ ॥ ಈ ವರ್ಷ ಚೈತ್ರ ಕೃಷ್ಣ ನವಮೀ ಶುಕ್ರವಾರ (ತಾ ॥ 14-04-2023) ಹಗಲು ೨೬-೩೬ ಘಟಿ ಸಮಯದಲ್ಲಿ ರವಿಯು ನಿರಯಣ ಮೇಷರಾಶಿ ಪ್ರವೇಶಿಸುವುದರಿಂದ ಪದಾರ್ಥಗಳಿಗೆ ಬೆಲೆ ಕಡಿಮೆ. ಯುದ್ಧ ಭಯ.

ಆರ್ದ್ರಾನಕ್ಷತ್ರ ಪ್ರವೇಶ ಫಲಂ :

ವತ್ಸರೇಸ್ಮಿನ್ ಆಷಾಢ ಶುಕ್ಲ ಚತುರ್ಥ್ಯಾಂ ಬೃಹಸ್ಪತಿವಾಸರೇ (ತಾ ॥ 22-06-2023) ರಾತ್ರೌ ರವೇಃ ಆರ್ದ್ರಾನಕ್ಷತ್ರ ಪ್ರವೇಶಾತ್ತತ್ಫಲಂ.

ಶ್ಲೋ ॥ ಆರ್ದ್ರಾ ಪ್ರವೇಶೋನಿಶಿ ಸಸ್ಯವೃದ್ಧಿಃ।
ಕ್ಷೇಮಂ ಸುಭಿಕ್ಷಂ ಸತತಂ ಪ್ರಜಾನಾಂ ॥

ಟೀ ॥ ಈ ವರ್ಷ ಆಷಾಢ ಶುಕ್ಲ ಚತುರ್ಥೀ ಗುರುವಾರ (ತಾ ॥ 22-06-2023) ರಾತ್ರಿ ರವಿಯು ಆರ್ದ್ರಾ ನಕ್ಷತ್ರವನ್ನು ಪ್ರವೇಶಿಸುವುದರಿಂದ ಸಸ್ಯವೃದ್ಧಿ, ಸುಭಿಕ್ಷ, ಕ್ಷೇಮ.

ಷರಾ : ತಾ ॥ 22-06-2023 ರಿಂದ ಮೂರು ದಿನಗಳ ಕಾಲ ಭೂಮಿಗೆ ರಜೋತ್ಪತ್ತಿಯುಂಟಾಗುವುದರಿಂದ ಆ ದಿನಗಳಲ್ಲಿ ಭೂಮಿಯಲ್ಲಿ ಬಿತ್ತನೆ ಮಾಡಬಾರದು.

## ಚಂದ್ರಚಾರ ಫಲಂ :

ಜ್ಯೇಷ್ಠ ಶುಕ್ಲ ಪ್ರತಿಪತ್ಫಲಂ :

ಶ್ಲೋ ॥ ಜಲಶೋಷಃಪ್ರಜಾಕ್ಷೋಭಃ ಛತ್ರಭಂಗೋಮಹೀಪತೇಃ।
ಮಧ್ಯಸಸ್ಯಮನರ್ಘಂಚ ಜ್ಯೇಷ್ಠಾದೌಶನಿವಾಸರೇ ॥

ಟೀ ॥ ಈ ವರ್ಷ ಜ್ಯೇಷ್ಠ ಶುಕ್ಲ ಪ್ರಥಮಾ ಶನಿವಾರ ಬಂದಿರುವುದರಿಂದ ಕೆರೆಕಟ್ಟೆಗಳಲ್ಲಿ ನೀರು ಬತ್ತಿ ಹೋಗುತ್ತದೆ. ಪ್ರಜೆಗಳಿಗೂ ರಾಜರಿಗೂ ಪೀಡೆ. ಬೆಳೆಕಡಿಮೆ. ಪದಾರ್ಥಗಳ ಬೆಲೆ ಸಾಮಾನ್ಯವಾಗಿರುತ್ತದೆ.

ಆಷಾಢ ಶುಕ್ಲ ಸ್ವಾತೀಯುತ ತಿಥಿ ಫಲಂ :

ಶ್ಲೋ ॥ ........ ಏಕಾದಶ್ಯಂತು ಮಧ್ಯಮಂ ॥

ಟೀ ॥ ಈ ವರ್ಷ ಆಷಾಢ ಶುಕ್ಲ ಏಕಾದಶೀ ದಿನ ಸ್ವಾತಿ ನಕ್ಷತ್ರ ಬಂದಿರುವುದರಿಂದ ಸಸ್ಯಗಳು ಮಧ್ಯಮವಾಗಿ ಫಲಿಸುತ್ತವೆ.

ಆಷಾಢ ಕೃಷ್ಣ ರೋಹಿಣೀಯುತ ತಿಥಿಫಲಂ :

ಶ್ಲೋ ॥ ದ್ವಾದಶೀರೋಹಿಣೀಯುಕ್ತಾ ಸರ್ವಸಸ್ಯ ವಿನಾಶಿನೀ ॥

ಟೀ ॥ ಈ ವರ್ಷ ಆಷಾಢ ಕೃಷ್ಣ ದ್ವಾದಶೀ ದಿನ ರೋಹಿಣಿ ನಕ್ಷತ್ರ ಬಂದಿರುವುದರಿಂದ ಸಸ್ಯಗಳು ನಾಶ ಹೊಂದುತ್ತವೆ.

ಮಕರ ಸಂಕ್ರಾಂತಿ ಫಲ : (ಸೂರ್ಯಸಿದ್ಧಾಂತ ಗಣಿತ ರೀತ್ಯಾ)

ವತ್ಸರೇಸ್ಮಿನ್ ಪೌಷ ಶುಕ್ಲ ಚತುರ್ಥ್ಯಾಂ ಇಂದುವಾಸರೇ ತಾ ॥ 15-01-2024 ಘಟೀ ೩-೫೭ ರ ಸಮಯೇ ಶತಭಿಷಾ ನಕ್ಷತ್ರೇ, ವರಿಯಾನ್ ಯೋಗೇ, ಭದ್ರಕರಣೇ, ಮಕರಲಗ್ನೇ ರವೇಃ ನಿರಯಣ ಮಕರರಾಶಿ ಪ್ರವೇಶಾತ್ತತ್ಫಲಂ :

ಈ ವರ್ಷ ಪೌಷ ಶುಕ್ಲಚತುರ್ಥೀಸೋಮವಾರ ತಾ ॥ 15-01-24 ಘಟೀ ೩-೫೭ ರ ಸಮಯದಲ್ಲಿ ಶತಭಿಷಾ ನಕ್ಷತ್ರ, ವರಿಯಾನ್ ಯೋಗ, ಭದ್ರ ಕರಣ, ಮಕರಲಗ್ನದಲ್ಲಿ ರವಿಯು ನಿರಯಣ ಮಕರರಾಶಿಯನ್ನು ಪ್ರವೇಶಿಸುತ್ತಾನೆ.

ಈ ಸಂಕ್ರಾಂತಿ ಪುರುಷನ ಹೆಸರು ಧ್ವಾಂಕ್ಷೀ.

ಫಲ : ಶೂದರಿಗೆ ಪೀಡೆ. ವಾರ ಫಲ : ಸುಭಿಕ್ಷ. ಧಾನ್ಯ : ಉದ್ದು. ಪಕ್ಷಿ ಫಲ : ಸುಭಿಕ್ಷ. ಕಾಲಫಲ : ವಿಪ್ರಪೀಡೆ. ಲಗ್ನಫಲ : ಉತ್ತರ ದಿಗ್ದೃಷ್ಟಿ. ಉತ್ತರ ದಿಗ್ಗಮನ. ಫಲ : ಆ ದಿಕ್ಕಿನಲ್ಲಿರುವವರಿಗೆ ಪೀಡೆ. ತಿಥಿಫಲ : ಮಧ್ಯಮ. ನಕ್ಷತ್ರಫಲ : ಅಂಧಲೋಚನದೃಷ್ಟಿ. ಫಲ : ಬೆಲೆ ಹೆಚ್ಚು. ಭರಣ್ಯಾದಿ ೬ ನೇ ಮಂಡಲ ಫಲ : ಕ್ಷೇಮ ಸುಭಿಕ್ಷ. ಯೋಗಫಲ : ದುರ್ಭಿಕ್ಷ. ಕರಣಫಲ : ಚಿಂತಾಚೇಷ್ಟೇ. ಕಾವೇರಿ ನದಿಯಲ್ಲಿ ಸ್ನಾನ. ಚಂದೀ ಆಚ್ಛಾದನ. ಕಸ್ತೂರಿ ಲೇಪನ. ಉದ್ದಿನ ಅಕ್ಷತೆ. ಮುಡಿದಿರುವುದು ಇರುವಂತಿಕೆ ಹೂವು. ಪುಷ್ಯರಾಗ ಭೂಷಣ. ಕಬ್ಬಿಣದ ಆಭರಣ. ಕಲ್ಲಿನ ಪಾತ್ರೆಯಲ್ಲಿ ಭಕ್ಷ್ಯಾಹಾರ. ಕುದುರೆವಾಹನ. ಸಿಂಹ ಉಪವಾಹನ. ಫಲ : ಧನಹಾನಿ. ಹಿಡಿದಿರುವುದು ಕತ್ತಿ ಆಯುಧ. ಚಂದೀ ಬಹಿರಂಬರ. ಅಂಗತಂಗ ಅವಸ್ಥೆ. ಫಲ : ದುಃಖ. ನೀಲಕಂಚುಕ. ವಯಸ್ಸಿನಲ್ಲಿ ವೃದ್ಧಾ. ಹಿಡಿದಿರುವುದು ಹಳೆಯ ಛತ್ರಿ

ಷರಾ : ಮಕರ ಸಂಕ್ರಾಂತಿ ಫಲವು ತಾ ॥ 15-01-2024 ರಿಂದ ಒಂದು ವರ್ಷ ಕಾಲ ನಡೆಯುತ್ತದೆ.

## ಸಂವತ್ಸರ ಫಲ ಸಂಗ್ರಹ

ಈ ವರ್ಷ ಪ್ರಜೆಗಳಿಗೆ ರೋಗಭಯವೂ, ರಾಜಕೋಪವೂ ಉಂಟಾಗುತ್ತದೆ. ವೃಕ್ಷಗಳು ಚೆನ್ನಾಗಿ ಫಲಿಸುತ್ತವೆ. ಮಳೆಯು ಚೆನ್ನಾಗಿ ಬೀಳುವ ಅವಕಾಶವಿದೆ. ಪ್ರಜೆಗಳು ಸ್ವಕರ್ಮನಿರತರಾಗಿರುತ್ತಾರೆ. ದೇವರ ಉತ್ಸವಗಳು ಹೆಚ್ಚಾಗಿ ನಡೆಯುತ್ತವೆ. ತರೀ ಮತ್ತು ಖುಷ್ಕೀ ಭೂಮಿಗಳಲ್ಲಿ ಬೆಳೆಯತಕ್ಕ ಎಲ್ಲಾ ಧಾನ್ಯಗಳೂ ಚೆನ್ನಾಗಿ ಬೆಳೆಯುತ್ತವೆ. ಬೂದು ಮಣ್ಣಿನ ಭೂಮಿಯಲ್ಲಿ ಉತ್ತಮವಾದ ಬೆಳೆಯಾಗುತ್ತದೆ. ಕಪ್ಪು ಮಣ್ಣಿನ ಭೂಮಿಯಲ್ಲಿ ಎಳ್ಳು ಮೊದಲಾದ ಧಾನ್ಯಗಳು ಚೆನ್ನಾಗಿ ಫಲಿಸುತ್ತವೆ. ಹಿಪ್ಪಲಿ, ಬೆಳ್ಳುಳ್ಳಿ, ಶುಂಠಿ, ತುಪ್ಪ, ಎಣ್ಣೆ, ಬೆಲ್ಲ, ಸಕ್ಕರೆ ಇವುಗಳ ಬೆಲೆ ಹೆಚ್ಚಾಗುತ್ತದೆ. ಬೆಳ್ಳಿ ಮೊದಲಾದ ಲೋಹಗಳ, ವಸ್ತ್ರಾಭರಣಾದಿಗಳು ವೃದ್ಧಿ ಹೊಂದುತ್ತವೆ. ಸಸ್ಯಸಮೃದ್ಧಿಯಾಗಿ ಪಶುಗಳಿಗೆ ಮೇವು ದೊರಕಿ ರೋಗರಹಿತವಾಗಿರುತ್ತವೆ.

## ಗುರು ಶುಕ್ರಾಸ್ತೋದಯ ಕಾಲಗಳು

| | | | |
|---|---|---|---|
| ಗುರು : | 30-03-23 | ಪಶ್ಚಾದಸ್ತ | 21-30 I.S.T. |
| | 25-04-23 | ಪ್ರಾಗುದಯ | 17-30 I.S.T. |
| ಶುಕ್ರ : | 08-08-23 | ಪಶ್ಚಾದಸ್ತ | 24-42 I.S.T. |
| | 16-08-23 | ಪ್ರಾಗುದಯ | 29-30 I.S.T. |

## ಗುರು, ಶನಿ ರಾಶಿ ಸಂಚಾರ ಕಾಲಗಳು

| ಗ್ರಹ | ಇಂದ | ವರೆಗೆ | ರಾಶಿ |
|---|---|---|---|
| ಗುರು : | ವರ್ಷಾದಿ | 21-04-2023 | ಮೀನ |
| | 21-04-2023 | ವರ್ಷಾಂತ | ಮೇಷ |
| ಶನಿ : | ವರ್ಷಾದಿ | ವರ್ಷಾಂತ | ಕುಂಭ |

## ಧರ್ಮಶಾಸ್ತ್ರ ವಿಚಾರ

ಋಗ್ವೇದ ಪ್ರಥಮೋಪಾಕರ್ಮ : ತಾ ॥ 29-08-2023 ನೇ ಮಂಗಳವಾರ ನಿಜ ಶ್ರಾವಣ ಶುಕ್ಲ ತ್ರಯೋದಶೀ - ಶ್ರವಣ ನಕ್ಷತ್ರವಿರುವದಿನ, ಋಗ್ವೇದ ನಿತ್ಯೋಪಾಕರ್ಮದ ದಿನವೇ ಪ್ರಥಮೋಪಾಕರ್ಮವನ್ನು ನಡೆಸಬಹುದು.

ಯಜುರ್ವೇದ ಪ್ರಥಮೋಪಾಕರ್ಮ : ತಾ ॥ 30-08-2023 ನೇ ಬುಧವಾರ ನಿಜ ಶ್ರಾವಣ ಶುಕ್ಲ ಚತುರ್ದಶೀ ಯಜುರ್ವೇದ ನಿತ್ಯೋಪಾಕರ್ಮದ ದಿನವೇ ಪ್ರಥಮೋಪಾಕರ್ಮವನ್ನು ನಡೆಸಬಹುದು.

ಸಾಮಗೋಪಾಕರ್ಮ : ಗೃಹ್ಯ ಸೂತ್ರೇ - " ಪ್ರೋಷ್ಠಪದೀಂ ಹಸ್ತೇನ " ಎಂದಿರುವುದರಿಂದ ಸಾಮಗೋಪಾಕರ್ಮಕ್ಕೆ ಹಸ್ತ ನಕ್ಷತ್ರವು ಮುಖ್ಯಕಾಲ.

उदये ..........................................चार्कभे ।
कुर्यु:..........................................ऋमात् ॥

ಎಂಬಂತೆ ಸಂಗವಕಾಲವ್ಯಾಪ್ತಿಯುಳ್ಳ ಹಸ್ತನಕ್ಷತ್ರದಲ್ಲಿ ಸಾಮಗರಿಗೆ ಉಪಾಕರ್ಮ.

ಸಾಮವೇದಿಗಳಿಗೆ ಉಪಾಕರ್ಮ ಕರಣಕ್ಕೆ

उपाकर्म..................................प्रातरेवहि ॥

ಎಂಬಂತೆ ಅಪರಾಹ್ಣಕಾಲ ಮುಖ್ಯವಾಗಿದೆ. ಕರ್ಮಕಾಲಕ್ಕೂ, ನಕ್ಷತ್ರವ್ಯಾಪ್ತಿಕಾಲಕ್ಕೂ ಸಂಬಂಧವೇ ಸಾಮಗರಿಗೆ ಇಲ್ಲ.

ನಕ್ಷತ್ರವ್ಯಾಪ್ತಿ ಕಾಲವು ಸ್ಮೃತಿಗಳಲ್ಲಿ ಭಿನ್ನಭಿನ್ನವಾಗಿದೆ.

हस्तर्क्षे ..........................................सिते ॥

ಎಂಬ ವಚನದಲ್ಲಿ ಉದಯ ವ್ಯಾಪಿನಿಯುಳ್ಳ ೩ ಮುಹೂರ್ತ ಹಸ್ತನಕ್ಷತ್ರ ವ್ಯಾಪ್ತಿ ಹೇಳಿದೆ.

ಮತ್ತೊಂದು ವಚನದಲ್ಲಿ :

हस्तर्क्षे ..........................................वैष्णवी ॥

ಹಸ್ತನಕ್ಷತ್ರವು ಸಂಗವಸ್ಪರ್ಶಿಯಿದ್ದರೆ ಸಾಕೆಂದು ಇರುತ್ತದೆ.

ಇನ್ನೊಂದು ವಚನವು

हस्तर्क्षत्वाष्ट्र..........................................युक् ॥

ಎಂಬಂತೆ ಹಸ್ತನಕ್ಷತ್ರವು ಸಂಗವಾಂತದವರೆಗೂ ಇದ್ದು ಚಿತ್ತಾ ನಕ್ಷತ್ರ ಸಂಬಂಧವುಳ್ಳ ದಿನದಲ್ಲಿ ಉಪಾಕರ್ಮ ನಡೆಸಬೇಕೆಂದು ವಿಶೇಷ ವಚನವಿದೆ.

ಹೀಗೆ ಉದಯಾದಿ. ೩ ಮುಹೂರ್ತ ವ್ಯಾಪ್ತಿ, ಸಂಗವೈಕದೇಶ ವ್ಯಾಪ್ತಿ, ಸಂಗವಾಂತವ್ಯಾಪ್ತಿ ಎಂದು ಅನೇಕ ರೀತಿಯಾದ ನಕ್ಷತ್ರ ವ್ಯಾಪ್ತಿಯನ್ನು ಹೇಳಲ್ಪಟ್ಟಿವೆ.

अर्धरात्रा..........................................ग्रहणेपिवा ।
उपाकर्म..........................................दोषकृत् ॥

ಮಧ್ಯರಾತ್ರಿಗಿಂತ ಮೊದಲೇ ಸಂಕ್ರಮಣ ಅಥವಾ ಗ್ರಹಣವು ಬಂದರೆ ಉಪಾಕರ್ಮವನ್ನು ಮಾಡಬಾರದು. ಮಧ್ಯರಾತ್ರಿನಂತರ ಸಂಕ್ರಾಂತಿ ಅಥವಾ ಗ್ರಹಣವು ಬಂದರೆ ಉಪಾಕರ್ಮ ನಡೆಸಲು ದೋಷವಿರುವುದಿಲ್ಲ.

ಪ್ರಕೃತ, ತಾ ॥ 17-09-2023 ಭಾನುವಾರ ಭಾದ್ರಪದ ಶುಕ್ಲ ದ್ವಿತೀಯಾ ೬-೪೭ ಘಟೀ ಮತ್ತು ಹಸ್ತನಕ್ಷತ್ರವೂ ಸೂರ್ಯೋದಯಾದಿ ೭-೨೯ ಘಟೀವರೆಗೂ ಇರುತ್ತದೆ. ಈ ದಿನ ಕನ್ಯಾ ಸಂಕ್ರಮಣವು ಸೂರ್ಯಸಿದ್ಧಾಂತ ಗಣಿತರೀತ್ಯಾ ೫೬-೩೯ ಘಟೀಗೂ, ವಾಕ್ಯಗಣಿತರೀತ್ಯಾ ೪೫-೩೩ ಘಟೀಗೂ ಸಂಭವಿಸುತ್ತದೆ.

ಈ ದಿನ ಸಂಗವಕಾಲವು ಸೂರ್ಯೋದಯಾದಿ ೬-೨ ಘಟೀಯಿಂದ ೧೨-೪ ಘಟೀವರೆಗೂ ಇರುತ್ತದೆ. ಹಸ್ತನಕ್ಷತ್ರವು ಸೂರ್ಯೋದಯಾದಿ ೭-೨೯ ಘಟೀ ಇರುವುದರಿಂದ ಸಂಗವ ಕಾಲದಲ್ಲಿ ಹಸ್ತನಕ್ಷತ್ರವು ಇದ್ದು ಚಿತ್ತಾ ನಕ್ಷತ್ರಯುಕ್ತವಾಗಿದೆ. ಈ ದಿನ ೪೫-೫ ಘಟೀಗೆ ಮಧ್ಯರಾತ್ರಿಯಾಗುವುದರಿಂದ, ಕನ್ಯಾಸಂಕ್ರಮಣವು ಸೂರ್ಯಸಿದ್ಧಾಂತ ಗಣಿತರೀತ್ಯಾ, ಹಾಗೂ ವಾಕ್ಯಗಣಿತರೀತ್ಯಾ ಮಧ್ಯರಾತ್ರಿಯನಂತರ ಸಂಭವಿಸುವುದರಿಂದ ಉಪಾಕರ್ಮ ನಡೆಸಲು ದೋಷವಿರುವುದಿಲ್ಲ.

ಆದ್ದರಿಂದ ತಾ ॥ 17-09-2023 ಭಾನುವಾರ ಸಾಮಗೋಪಾಕರ್ಮವನ್ನು ನಡೆಸುವುದು ಸೂಕ್ತವೆಂದು ಬರೆದಿರುತ್ತೇವೆ.

ಕರ್ನಾಟಕದಲ್ಲಿ ನಮ್ಮ ಪೂರ್ವಿಕರು ಸಂಗವಸ್ಪರ್ಶಿಯಾದ ಹಸ್ತ ನಕ್ಷತ್ರದ ದಿನವೇ ಸಾಮಗೋಪಾಕರ್ಮವನ್ನು ಆಚರಿಸಿಕೊಂಡು ಬಂದಿರುವುದು ಗಮನಿಸಬೇಕಾದ ಅಂಶ.

ಈ ದಿನವೇ ಸಾಮವೇದ ಪ್ರಥಮೋಪಾಕರ್ಮವನ್ನೂ ಸಹ ನಡೆಸಬಹುದು.

## ವರಸಿದ್ಧಿ ವಿನಾಯಕ ವ್ರತ

गणनाथ ..........................................यदि ।
जयायुक्ता..........................................संयुता ॥
प्रहरद्वय..........................................वर्तते ।
परविद्धैव..........................................त्यजेत् ॥

ಎಂಬ ವಚನದಂತೆ, ಚತುರ್ಥೀ ತಿಥಿಯು ಮಧ್ಯಾಹ್ನವ್ಯಾಪಿನೀ ಹಾಗೂ ಯಾಮದ್ವಯ ವ್ಯಾಪಿನೀಯಿರುವ ದಿನ ವರಸಿದ್ಧಿವಿನಾಯಕ ವ್ರತಾಚರಣೆ ನಡೆಸಬೇಕು.

ಚತುರ್ಥೀ ತಿಥಿಯು ಮಧ್ಯಾಹ್ನವ್ಯಾಪಿನೀ ಹಾಗೂ ಯಾಮದ್ವಯವ್ಯಾಪಿನಿಯಲ್ಲಿ ಇಲ್ಲದಿರುವಾಗ :

गणेशव्रते..........................................चतुर्थी ।
चतुर्थीतु ..........................................फलप्रदा ॥
कर्तव्या .......................................... इति ।
हेमाद्रौ, ब्रह्मवैवर्तात् च ॥

ಗಣೇಶವ್ರತವೊಂದನ್ನು ಹೊರತುಪಡಿಸಿ, ಚತುರ್ಥೀ ತಿಥಿಯು ಪರವಿದ್ಧಾ ಎಂದರೆ ಪಂಚಮೀಯುಕ್ತವಾದದ್ದೇ ಶ್ರೇಷ್ಠವೆಂದು ಭಾವಿಸಲ್ಪಟ್ಟಿದೆ.

ಗಣೇಶ ವ್ರತದಲ್ಲಿ ತೃತೀಯಾ ಸಂಯುಕ್ತವಾದ ಚತುರ್ಥೀಯನ್ನೇ ಪರಿಗಣಿಸಬೇಕು. ಹೇಮಾದ್ರಿಯಲ್ಲಿ ಈ ಕುರಿತು ಬ್ರಹ್ಮವೈವರ್ತ ಪುರಾಣದಲ್ಲಿ ಈ ರೀತಿ ತಿಳಿಸಿದೆ :

" ಚತುರ್ಥೀ ತಿಥಿಯು ತೃತೀಯ ಸಂಯುಕ್ತವಾಗಿದ್ದರೆ ಅದಕ್ಕೆ ಅಧಿಕ ಪುಣ್ಯಫಲವಿದೆ. ಏಕೆಂದರೆ ತೃತೀಯಾಯುಕ್ತವಾದ ಚತುರ್ಥೀಯು ಅತ್ಯಂತ ಪ್ರಿಯಕರವಾಗಿದೆ. "

ಈ ವರ್ಷ ತಾ ॥ 19-09-2023 ಮಂಗಳವಾರ ಸೂರ್ಯಸಿದ್ಧಾಂತ ಗಣಿತರೀತ್ಯಾ ಭಾದ್ರಪದ ಶುಕ್ಲ ಚತುರ್ಥೀ ತಿಥಿಯು ಸೂರ್ಯೋದಯಾದಿ ೧೦-೨೪ ಘಟೀಗೆ ಮುಗಿಯುತ್ತದೆ.

ಈ ದಿನ ಮಧ್ಯಾಹ್ನ ವ್ಯಾಪಿನಿ ಅವಧಿ : ೧೨-೩ ರಿಂದ ೧೮-೫ ಘಟೀ

ಈ ದಿನ ಯಾಮದ್ವಯವ್ಯಾಪಿನಿ ಸೂರ್ಯೋದಯಾದಿ ೧೫-೪ ಘಟೀವರೆಗೆ.

ಹಾಗಾಗಿ ತಾ ॥ 19-09-2023 ಮಂಗಳವಾರ ಸೂರ್ಯಸಿದ್ಧಾಂತ ಗಣಿತರೀತ್ಯಾ ಭಾದ್ರಪದ ಶುಕ್ಲ ಚತುರ್ಥೀ ತಿಥಿಯು ಮಧ್ಯಾಹ್ನವ್ಯಾಪಿನಿ ಹಾಗೂ ಯಾಮದ್ವಯ ವ್ಯಾಪಿನಿಯಲ್ಲಿ ದೊರಕುವುದಿಲ್ಲ.

ಆದ್ದರಿಂದ " चतुर्थी गणनाथस्य मातृविद्धा प्रशस्यते " ಎಂಬ ವಚನಾನುಸಾರ

ತಾ ॥ 18-09-2023 ಸೋಮವಾರ ಸ್ವರ್ಣಗೌರೀವ್ರತದ ದಿನವೇ ವರಸಿದ್ಧಿವಿನಾಯಕ ವ್ರತಾಚರಣೆ ನಡೆಸಬೇಕು.

ಹಿಂದಿನಿಂದಲೂ ನಮ್ಮ ಪೂರ್ವಿಕರು ಧರ್ಮಶಾಸ್ತ್ರ ಸಮ್ಮತವಾದ ಸೂರ್ಯಸಿದ್ಧಾಂತ ಗಣಿತಾನುಸಾರ ಹಬ್ಬ, ವ್ರತ, ಶ್ರಾದ್ಧಾದಿಗಳನ್ನು ಆಚರಿಸುತ್ತಾ ಬಂದಿರುವುದರಿಂದ, ತಾ ॥ 18-09-2023 ಸೋಮವಾರ ಸ್ವರ್ಣಗೌರೀವ್ರತದ ದಿನವೇ ವರಸಿದ್ಧಿವಿನಾಯಕ ವ್ರತಾಚರಣೆಯನ್ನು ಬರೆದಿರುತ್ತೇವೆ.

ದೃಗ್ಗಣಿತ ರೀತ್ಯಾ (ಪಾಶ್ಚಾತ್ಯ ಸಾಯನಗಣಿತ) ತಾ ॥ 19-09-23 ಮಂಗಳವಾರ ಭಾದ್ರಪದ ಶುಕ್ಲ ಚತುರ್ಥೀ ತಿಥಿಯು ಸೂರ್ಯೋದಯಾದಿ ೧೮-೪೩ ಘಟೀಗೆ ಮುಗಿಯುವುದರಿಂದ, ಚತುರ್ಥೀ ತಿಥಿಯು ಮಧ್ಯಾಹ್ನವ್ಯಾಪಿನಿ ಹಾಗೂ ಯಾಮದ್ವಯ ವ್ಯಾಪಿನಿಯಲ್ಲಿ ದೊರಕುವುದರಿಂದ ತಾ ॥ 19-09-2023 ಮಂಗಳವಾರ ದಿನ ವರಸಿದ್ಧಿವಿನಾಯಕ ವ್ರತಾಚರಣೆಗೆ ಅವಕಾಶವಿದೆಯೆಂದು ದೃಗ್ಗಣಿತ ಪಂಚಾಂಗ ಅನುಸರಿಸುವವರು ಅಭಿಪ್ರಾಯಪಡುತ್ತಾರೆ.

### ಗಮನಿಸಬೇಕಾದ ಅಂಶ :

ಸೂರ್ಯಸಿದ್ಧಾಂತ ಗಣಿತರೀತ್ಯಾ ಭಾದ್ರಪದ ಶುಕ್ಲ ಚತುರ್ಥೀ ತಿಥಿಯು ಮಧ್ಯಾಹ್ನವ್ಯಾಪಿನಿ ಹಾಗೂ ಯಾಮದ್ವಯವ್ಯಾಪಿನಿಯಲ್ಲಿ ದೊರಕದಿದ್ದಾಗ, ಭಾದ್ರಪದ ಶುಕ್ಲ ತೃತೀಯಾ ಸ್ವರ್ಣಗೌರೀವ್ರತದ ದಿನವೇ ವರಸಿದ್ಧಿವಿನಾಯಕ ವ್ರತವನ್ನು ಈ ಕೆಳಕಂಡ ವರ್ಷಗಳಲ್ಲಿ ಆಚರಿಸುತ್ತಾರೆ :

### ಒಂಟಿಕೊಪ್ಪಲ್ ಪಂಚಾಂಗ

1. ಬಹುಧಾನ್ಯ ಸಂ. ದ ತಾ ॥ 28-08-1938 ಭಾನುವಾರ ಭಾದ್ರಪದ ಶುಕ್ಲ ತೃತೀ ೧೪-೪೪ ಘಟೀ (ಹ.12-09) ಸ್ವರ್ಣಗೌರೀವ್ರತ ।

ವರಸಿದ್ಧಿವಿನಾಯಕವ್ರತ.

ತಾ ॥ 29-08-1938 ಸೋಮವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೩೮ ಘಟೀ (ಹ.11-18)

2. ಮನ್ಮಥ ಸಂ.ದ ತಾ ॥ 19-09-1955 ಸೋಮವಾರ ನಿಜಭಾದ್ರಪದ ಶುಕ್ಲ ತೃತೀ ೧೨-೧೮ ಘಟೀ (ಹ.11-10) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 20-09-1955 ಮಂಗಳವಾರ ಭಾದ್ರಪದ ಶುಕ್ಲ ಚತುರ್ಥೀ ೧೪-೫೩ ಘಟೀ (ಹ.12-12)

3. ಪ್ಲವ ಸಂ.ದ ತಾ ॥ 13-09-1961 ಬುಧವಾರ ಭಾದ್ರಪದ ಶುಕ್ಲ ತೃತೀ ೧೧-೩೫ ಘಟೀ (ಹ.10-53) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 14-09-1961 ಗುರುವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೫೩ ಘಟೀ (ಹ.11-24)

4. ಈಶ್ವರ ಸಂ.ದ ತಾ ॥ 05-09-1997 ಶುಕ್ರವಾರ ಭಾದ್ರಪದ ಶುಕ್ಲ ತೃತೀಯಾ ೮-೨೦ ಘಟೀ (ಬೆ.9-35) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 06-09-1997 ಶನಿವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೨೨ ಘಟೀ (ಹ.11-12)

ಶ್ರೀ ಸೀತಾರಾಘವ ವೈದ್ಯಶಾಲೆಯ ಕೊಳ್ಳೇಗಾಲದ ಪಂಚಾಂಗ

1. ಬಹುಧಾನ್ಯ ಸಂ. ದ ತಾ ॥ 28-08-1938 ಭಾನುವಾರ ಭಾದ್ರಪದ ಶುಕ್ಲ ತೃತೀ ೧೪-೪೬ ಘಟೀ (ಹ.12-10) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 29-08-1938 ಸೋಮವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೩೮ ಘಟೀ (ಹ.11-18)

2. ಮನ್ಮಥ ಸಂ.ದ ತಾ ॥ 19-09-1955 ಸೋಮವಾರ ನಿಜಭಾದ್ರಪದ ಶುಕ್ಲ ತೃತೀ ೧೨-೧೪ ಘಟೀ (ಹ.11-09) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 20-09-1955 ಮಂಗಳವಾರ ಭಾದ್ರಪದ ಶುಕ್ಲ ಚತುರ್ಥೀ ೧೪-೪೫ ಘಟೀ (ಹ.12-09)

3. ಪ್ಲವ ಸಂ.ದ ತಾ ॥ 13-09-1961 ಬುಧವಾರ ಭಾದ್ರಪದ ಶುಕ್ಲ ತೃತೀ ೧೧-೩೦ ಘಟೀ (ಹ.10-51) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 14-09-1961 ಗುರುವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೪೬ ಘಟೀ (ಹ.11-21)

ಮೈಸೂರು ಅರಮನೆ ಪಂಚಾಂಗ

1. ಬಹುಧಾನ್ಯ ಸಂ. ದ ತಾ ॥ 28-08-1938 ಭಾನುವಾರ ಭಾದ್ರಪದ ಶುಕ್ಲ ತೃತೀ ೧೪-೯ ಘಟೀ ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 29-08-1938 ಸೋಮವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೩೮ ಘಟೀ

2. ಪ್ಲವ ಸಂ.ದ ತಾ ॥ 13-09-1961 ಬುಧವಾರ ಭಾದ್ರಪದ ಶುಕ್ಲ ತೃತೀ ೧೧-೨೯ ಘಟೀ ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 14-09-1961 ಗುರುವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೪೫ ಘಟೀ

ಶ್ರೀ ಸಂಪತ್ಕೃಷ್ಣ ಜೋಯಿಸರ ಪಂಚಾಂಗ

1. ಬಹುಧಾನ್ಯ ಸಂ. ದ ತಾ ॥ 28-08-1938 ಭಾನುವಾರ ಭಾದ್ರಪದ ಶುಕ್ಲ ತೃತೀ ೧೪-೫೨ ಘಟೀ ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 29-08-1938 ಸೋಮವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೪೭ ಘಟೀ

2. ಪ್ಲವ ಸಂ.ದ ತಾ ॥ 13-09-1961 ಬುಧವಾರ ಭಾದ್ರಪದ ಶುಕ್ಲ ತೃತೀ ೧೧-೩೩ ಘಟೀ (ಹ. 10-49) ಸ್ವರ್ಣಗೌರೀವ್ರತ । ವರಸಿದ್ಧಿವಿನಾಯಕವ್ರತ.

ತಾ ॥ 14-09-1961 ಗುರುವಾರ ಭಾದ್ರಪದ ಶುಕ್ಲ ಚತುರ್ಥೀ ೧೨-೫೦ ಘಟೀ

## ಗ್ರಹಣ ವಿಚಾರ

ಈ ವರ್ಷ ಸಂಭವಿಸುವ ಗ್ರಹಣಗಳು :

1. ತಾ ॥ 20-04-2023 ಗುರುವಾರ ಚೈತ್ರ ಕೃಷ್ಣ ● ಅಮಾವಾಸ್ಯೆ ಸಂಭವಿಸುವ ಸೂರ್ಯ ಗ್ರಹಣವು ಭಾರತ ದೇಶಕ್ಕೆ ಕಾಣಿಸುವುದಿಲ್ಲವಾದ್ದರಿಂದ ಗ್ರಹಣಾಚರಣೆಯಿಲ್ಲ.

2. ತಾ ॥ 05-05-2023 ಶುಕ್ರವಾರ ವೈಶಾಖ ಶುಕ್ಲ ○ ಪೂರ್ಣಿಮಾ ಸಂಭವಿಸುವ ಭೂಛಾಯ (Penumbral) ಚಂದ್ರ ಗ್ರಹಣ ಕಾಣಿಸುವುದಿಲ್ಲ.

3. ತಾ ॥ 14-10-2023 ಶನಿವಾರ ಭಾದ್ರಪದ ಕೃಷ್ಣ ● ಅಮಾವಾಸ್ಯೆ ಸಂಭವಿಸುವ ಸೂರ್ಯ ಗ್ರಹಣವು ಭಾರತ ದೇಶಕ್ಕೆ ಕಾಣಿಸುವುದಿಲ್ಲವಾದ್ದರಿಂದ ಗ್ರಹಣಾಚರಣೆಯಿಲ್ಲ.

4. ತಾ ॥ 28-10-2023 ಶನಿವಾರ ಆಶ್ವಯುಜ ಶುಕ್ಲ ○ ಪೂರ್ಣಿಮಾ ಸಂಭವಿಸುವ ಪಾರ್ಶ್ವಚಂದ್ರ ಗ್ರಹಣವು ಭಾರತ ದೇಶದಲ್ಲಿ ಕಾಣಿಸುವುದರಿಂದ ಗ್ರಹಣಾಚರಣೆಯುಂಟು.

5. ತಾ ॥ 25-03-2024 ಸೋಮವಾರ ಫಾಲ್ಗುಣ ಶುಕ್ಲ ○ ಪೂರ್ಣಿಮಾ ಸಂಭವಿಸುವ ಭೂಛಾಯ (Penumbral) ಚಂದ್ರ ಗ್ರಹಣವು ಕಾಣಿಸುವುದಿಲ್ಲ.

6. ತಾ ॥ 08-04-2024 ಸೋಮವಾರ ಫಾಲ್ಗುಣ ಕೃಷ್ಣ ● ಅಮಾವಾಸ್ಯೆ ಸಂಭವಿಸುವ ಸೂರ್ಯ ಗ್ರಹಣವು ಭಾರತ ದೇಶಕ್ಕೆ ಕಾಣಿಸುವುದಿಲ್ಲವಾದ್ದರಿಂದ ಗ್ರಹಣಾಚರಣೆಯಿಲ್ಲ.



ತಾ॥28-10-2023 ಶನಿವಾರ ಆಶ್ವಯುಜ ಶುಕ್ಲ ○ ಪೂರ್ಣಿಮಾ ಸಂಭವಿಸುವ ರಾಹುಗ್ರಸ್ತ ಚಂದ್ರ ಗ್ರಹಣ.

| ರಾಹುಗ್ರಸ್ತ ಚಂದ್ರ ಗ್ರಹಣ. | ಘಟೀ-ವಿಘಟೀ | I.S.T. ಘಂ-ನಿ | ರಾತ್ರಿ ಘಂ-ನಿ |
|---|---|---|---|
| ಗ್ರಹಣ ಸ್ಪರ್ಶಕಾಲ : | ೪೬-೫೫ | 25-04 | 1-04 |
| ಗ್ರಹಣ ಮಧ್ಯಕಾಲ : | ೪೮-೩೫ | 25-44 | 1-44 |
| ಮೋಕ್ಷಕಾಲ : | ೫೦-೧೫ | 26-24 | 2-24 |

ಆದ್ಯಂತ ಪುಣ್ಯಕಾಲ ಘಟೀ ೩-೨೦ ಘಟೀ.

1. ಭೋಜನ ವಿಚಾರ : ಈ ದಿನ ಹಗಲು 3-00 ಘಂಟೆವರೆವಿಗೂ ಭೋಜನಕ್ಕೆ ಅವಕಾಶವಿದೆ.

ವೃದ್ಧರು, ರೋಗಿಗಳು, ಅಶಕ್ತರು ಈ ದಿನ ಸೂರ್ಯಾಸ್ತದವರೆಗೂ ಆಹಾರ ಸೇವನೆ ಮಾಡಬಹುದು.

2. ತರ್ಪಣ ವಿಚಾರ : ಗ್ರಹಣ ಮಧ್ಯಕಾಲಾನಂತರ ಅಂದರೆ ರಾತ್ರಿ 1-44 ರಿಂದ 2-24 ಘಂಟೆಯೊಳಗೆ ತರ್ಪಣ ನಡೆಸತಕ್ಕದ್ದು.

3. ಶ್ರಾದ್ಧ ವಿಚಾರ : ಶ್ರಾದ್ಧ ಕರ್ಮಗಳು ತಾ ॥ 28-10-2023 ಶನಿವಾರದ ದಿನ ಆಶ್ವಯುಜ ಶುಕ್ಲ ○ ಪೂರ್ಣಿಮಾ ಶ್ರಾದ್ಧ ನಡೆಸಬಹುದು.

4. ಶಾಂತಿ ವಿಚಾರ : ಅಶ್ವಿನಿ ನಕ್ಷತ್ರದವರೂ, ಮೇಷ ರಾಶಿಯವರೂ, ಈ ಕೆಳಗೆ ಕೊಟ್ಟಿರುವ ಶ್ಲೋಕವನ್ನು ಒಂದು ಕಾಗದದ ಮೇಲೆ ಬರೆದು ಗ್ರಹಣ ಮುಗಿಯುವವರೆಗೂ ತಮ್ಮ ಬಳಿ ಇಟ್ಟುಕೊಂಡಿದ್ದು ಗ್ರಹಣ ಮೋಕ್ಷಾನಂತರ, ಶುದ್ಧಬಿಂಬದರ್ಶನಾನಂತರ ಯಥಾಶಕ್ತಿ ದಕ್ಷಿಣೆ ಸಮೇತ ದಾನಮಾಡತಕ್ಕದ್ದು.

ಶ್ಲೋ ॥ ಯೋ ಸೌ ವಜ್ರಧರೋ ದೇವ: ಆದಿತ್ಯಾನಾಂ ಪ್ರಭುರ್ಮತ: ।

ಚಂದ್ರಗ್ರಹೋಪರಾಗೋತ್ಥ ಗ್ರಹಪೀಡಾಂ ವ್ಯಪೋಹತು ॥

ಯೋಸೌ ದಂಡಧರೋ ದೇವ: ಯಮೋ ಮಹಿಷವಾಹನ: ।

ಚಂದ್ರಗ್ರಹೋಪರಾಗೋತ್ಥ ಗ್ರಹಪೀಡಾಂ ವ್ಯಪೋಹತು ॥

ಯೋ ಸೌ ಶೂಲಧರೋ ದೇವ: ಪಿನಾಕೀ ವೃಷವಾಹನ: ।

ಚಂದ್ರಗ್ರಹೋಪರಾಗೋತ್ಥ ಗ್ರಹಪೀಡಾಂ ವ್ಯಪೋಹತು ॥

ಸೂಚನೆ : ಧರ್ಮಶಾಸ್ತ್ರ ಗ್ರಂಥದಲ್ಲಿ ತಿಳಿಸಿರುವ ರೀತಿ ಗ್ರಹಣಾಚರಣೆಯ ಕ್ರಮವನ್ನು ಮೇಲೆ ಬರೆದಿರುತ್ತೇವೆ. ಅದರಂತೆ ಆಚರಿಸುವುದು ಅಥವಾ ಆಚರಿಸದಿರುವುದು ಮಹಾಜನಗಳ ವೈಯುಕ್ತಿಕ ಅಭಿಪ್ರಾಯಕ್ಕೆ ಸೇರಿದ್ದು.

## ವೃಷ್ಟಿ (ಮಳೆ) ಯೋಗ ದೃಗ್ಗಣಿತ ರೀತ್ಯಾ

### ಅಶ್ವಿನಿ ಮಳೆ : ತಾ ॥ 14-04-23 ರಿಂದ 28-04-23 ರವರೆಗೆ

ಈ ಮಳೆಯು ಪೂರ್ಣ ಜಲಲಗ್ನದಲ್ಲಿ ಹುಟ್ಟಿದರೂ, ಸಂಧಿಯಲ್ಲಿ ಪತನ, ಸೂರ್ಯ-ಸೂರ್ಯ ನಕ್ಷತ್ರ, ಪುಂ-ಪುಂ ನಕ್ಷತ್ರಯೋಗಗಳಿಂದಲೂ, ಗ್ರಹಗಳ ವಾತಾತಿವಾತ ನಾಡಿಸಂಚಾರದಿಂದಲೂ ಮಳೆಗೆ ಹೆಚ್ಚು ಅಡಚಣೆಯಿದ್ದು, ಶುಕ್ರ ನಕ್ಷತ್ರಸಂಚಾರ ಹಾಗೂ ಬುಧಾಸ್ತಕಾಲಗಳಲ್ಲಿ ಅತ್ಯಲ್ಪವಾದ ಮಳೆಯಾಗಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಏಪ್ರಿ 13, 14, 15, 16, 17, 18, 22, 23, 27

### ಭರಣಿ ಮಳೆ : ತಾ ॥ 28-04-23 ರಿಂದ 11-05-23 ರವರೆಗೆ

ಸಮುದ್ರದಲ್ಲಿ ಪತನ, ಗ್ರಹಗಳಸೌಮ್ಯ, ಜಲನಾಡಿಸಂಚಾರ, ಸೂರ್ಯ-ಚಂದ್ರ ನಕ್ಷತ್ರಯೋಗ, ಸ್ತ್ರೀ-ಪುಂ ನಕ್ಷತ್ರಯೋಗ, ಶುಕ್ರನ ಅಶ್ವಿನ್ಯಾದಿ ನಕ್ಷತ್ರಸಂಚಾರ, ಬುಧೋದಯಗಳಿಂದ ಬಿತ್ತನೆಗೆ ಅನುಕೂಲವಾದ ಸಾಧಾರಣವಾದ ಮಳೆ ನಿರೀಕ್ಷಿಸಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಏಪ್ರಿ 28, 29, 30 ಮೇ 1, 2, 10

### ಕೃತ್ತಿಕ ಮಳೆ : ತಾ ॥ 11-05-23 ರಿಂದ 25-05-23 ರವರೆಗೆ

ಗ್ರಹಗಳ ನಾಡೀಸಂಚಾರ ಉತ್ತಮವಾಗಿರುವಿಕೆ, ಪೂರ್ಣಜಲ ಲಗ್ನದಲ್ಲಿ ಹುಟ್ಟುವಿಕೆ, ಸಮುದ್ರದಲ್ಲಿ ಪತನ, ಸೂರ್ಯ-ಚಂದ್ರ, ಪುಂ-ಸ್ತ್ರೀ ನಕ್ಷತ್ರಯೋಗ, ಶುಕ್ರನ ನಕ್ಷತ್ರಸಂಚಾರಗಳಿಂದ ಖಂಡವೃಷ್ಟಿಯಾಗುವ ಸಾಧ್ಯತೆಗಳಿವೆ. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಮೇ 11, 12, 13, 14, 15, 16, 19, 20, 24

### ರೋಹಿಣಿ ಮಳೆ : ತಾ ॥ 25-05-23 ರಿಂದ 08-06-23 ರವರೆಗೆ

ಈ ಮಳೆಯು ಪಾದಜಲ ಲಗ್ನದಲ್ಲಿ ಹುಟ್ಟುವಿಕೆ, ಗ್ರಹಗಳ ವಾತಾತಿವಾತ, ದಹನನಾಡೀ ಸಂಚಾರ, ಸೂರ್ಯ-ಸೂರ್ಯ ನಕ್ಷತ್ರಯೋಗ, ಶುಕ್ರನ ಪಶ್ಚಿಮಮುಖಾದಿ ಪಂಚಕ ನಕ್ಷತ್ರ ಸಂಚಾರ ಮೊದಲಾದವುಗಳಿಂದ ಮಳೆಗೆ ಹೆಚ್ಚು ತೊಂದರೆಯಿದ್ದು, ತಟದಲ್ಲಿ ಪತನವಾಗುವಿಕೆ, ಶುಕ್ರ - ಶನಿ ಸ್ಥಿತಿಗಳಿಂದಾಗಿ ಅತ್ಯಲ್ಪವಾದ ಮಳೆಯಾಗಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಮೇ 25, 26, 27, 28, 29, 30 ಜೂನ್ 7

### ಮೃಗಶಿರಾ ಮಳೆ : ತಾ ॥ 08-06-23 ರಿಂದ 22-06-23 ರವರೆಗೆ

ಸೂರ್ಯ-ಸೂರ್ಯ ನಕ್ಷತ್ರ, ನಪುಂ-ಪುಂ ಯೋಗ, ಗ್ರಹಗಳ ಅತಿವಾತ, ದಹನನಾಡೀ ಸಂಚಾರ, ಪಾದಜಲ ಲಗ್ನದಲ್ಲಿ ಹುಟ್ಟುವಿಕೆ, ಶುಕ್ರನಕ್ಷತ್ರ ಸಂಚಾರಗಳಿಂದ ಮಳೆಗೆ ಪ್ರತಿಬಂಧಕವಿದ್ದು, ಶುಕ್ರ-ಶನಿಸ್ಥಿಯಿಂದಾಗಿ ತುಂಬಾ ಕಡಿಮೆ ಮಳೆಯಾಗುವ ಸಂಭವವಿದೆ. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಜೂನ್ 8, 9, 10, 11, 12, 15, 16, 17, 20, 21

### ಆರ್ದ್ರೆ ಮಳೆ : ತಾ ॥ 22-06-23 ರಿಂದ 06-07-23 ರವರೆಗೆ

ಸಂಧಿಯಲ್ಲಿ ಪತನ, ಗ್ರಹಗಳ ಸೌಮ್ಯಾಮೃತ, ಜಲನಾಡೀಸಂಚಾರ, ಬುಧಾಸ್ತ, ಶುಕ್ರ-ಶನಿಸ್ಥಿತಿ ಮೊದಲಾದ ಯೋಗಗಳಿಂದ, ಸಿಂಹಾಂಗಾರಕ ದೋಷ ವಿದ್ದಾಗ್ಯೂ ಅಲ್ಪವಾದ ಮಳೆ ನಿರೀಕ್ಷಿಸಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಜೂನ್ 22, 23, 24, 25, 26, 27 ಜುಲೈ 4, 5

### ಪುನರ್ವಸು ಮಳೆ : ತಾ ॥ 06-07-23 ರಿಂದ 20-7-23 ರವರೆಗೆ

ಈ ಮಳೆಯು ನಿರ್ಜಲ ಲಗ್ನದಲ್ಲಿ ಹುಟ್ಟುವಿಕೆ, ಸಂಧಿಯಲ್ಲಿ ಪತನ, ಶುಕ್ರನಪಶ್ಚಿಮಮುಖಾದಿ ಪಂಚಕ ನಕ್ಷತ್ರ ಸಂಚಾರ, ಸಿಂಹಾಂಗಾರಕ ದೋಷಗಳಿಂದ ಮಳೆಗೆ ತೊಂದರೆಯಿದ್ದು, ಗ್ರಹಗಳ ಸೌಮ್ಯಾಮೃತ, ಜಲನಾಡಿಸಂಚಾರ, ಶುಕ್ರ-ಶನಿಸ್ಥಿತಿ, ಬುಧಾಸ್ತಗಳಿಂದಾಗಿ ಸ್ವಲ್ಪಮಟ್ಟಿನ ಮಳೆಗೆ ಅವಕಾಶವಿದೆ. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಜುಲೈ 6, 7, 8, 9, 13, 14, 17, 18, 19

### ಪುಷ್ಯ ಮಳೆ : ತಾ ॥ 20-07-23 ರಿಂದ 03-08-23 ರವರೆಗೆ

ನಿರ್ಜಲ ಲಗ್ನದಲ್ಲಿ ಹುಟ್ಟುವಿಕೆ, ಪರ್ವತದಲ್ಲಿ ಪತನ, ಚಂದ್ರ-ಚಂದ್ರ ನಕ್ಷತ್ರಯೋಗ, ಶುಕ್ರ ನಕ್ಷತ್ರಸಂಚಾರ ಉತ್ತಮವಾಗಿಲ್ಲದಿರುವಿಕೆಗಳಿಂದ ಮಳೆಗೆ ಹೆಚ್ಚು ತೊಂದರೆಯಿದ್ದು ಶುಕ್ರ - ಶನಿಸ್ಥಿತಿಯಿಂದಲೂ, ಬುಧ, ಶುಕ್ರ ಸಾಮೀಪ್ಯದಿಂದಲೂ ಅತ್ಯಲ್ಪವಾದ ಮಳೆಯಾಗಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಜುಲೈ 20, 21, 22, 23, 24 ಆಗಸ್ಟ್ 1, 2

### ಆಶ್ಲೇಷಾ ಮಳೆ : ತಾ ॥ 03-08-23 ರಿಂದ 17-08-23 ರವರೆಗೆ

ಗ್ರಹಗಳ ನಾಡೀಸಂಚಾರ ಉತ್ತಮವಾಗಿಲ್ಲದಿರುವಿಕೆ, ಪರ್ವತದಲ್ಲಿ ಪತನ, ಶುಕ್ರನ ಪಶ್ಚಿಮಮುಖಾದಿ ನಕ್ಷತ್ರ ಸಂಚಾರ, ಸಿಂಹಾಂಗಾರಕದೋಷ ಮೊದಲಾದ ದುರ್ಯೋಗಗಳಿಂದ ಮಳೆಗೆ ಅಡಚಣೆಯಿದ್ದಾಗ್ಯೂ, ಶುಕ್ರೋದಯ ಕಾಲದಲ್ಲಿ ಖಂಡವೃಷ್ಟಿಗೆ ಅವಕಾಶ ಕಂಡು ಬರುವುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಆಗಸ್ಟ್ 3, 4, 5, 6, 9, 10, 14, 15, 16

### ಮಖಾ ಮಳೆ : ತಾ ॥ 17-08-23 ರಿಂದ 31-08-23 ರವರೆಗೆ

ಪಾದಜಲದಲ್ಲಿ ಹುಟ್ಟುವಿಕೆ, ಶುಕ್ರನ ಪಶ್ಚಿಮಮುಖಾದಿ ನಕ್ಷತ್ರ ಸಂಚಾರ, ಕನ್ಯಾಂಗಾರಕ ದೋಷಗಳಿಂದ ಮಳೆಯಾಗುವ ಅವಕಾಶಗಳು ಕಡಿಮೆಯಿದ್ದು, ಶುಕ್ರ-ಶನಿಸ್ಥಿತಿ, ಗ್ರಹಗಳ ಸೌಮ್ಯಾಮೃತ, ಜಲನಾಡಿಸಂಚಾರ, ಬುಧಾಸ್ತಗಳಿಂದ ಸಾಧಾರಣವಾದ ಮಳೆಯಾಗಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಆಗಸ್ಟ್ 17, 18, 19, 20, 28, 29, 30

### ಪೂಫ ಮಳೆ : ತಾ ॥ 31-08-23 ರಿಂದ 13-09-23 ರವರೆಗೆ

ಗ್ರಹಗಳ ನಾಡೀಸಂಚಾರ ಉತ್ತಮವಾಗಿಲ್ಲದಿರುವುದರಿಂದಲೂ, ಪಾದಜಲದಲ್ಲಿ ಹುಟ್ಟುವಿಕೆ, ಸ್ತ್ರೀ-ನಪುಂ ನಕ್ಷತ್ರಯೋಗ, ಸೂರ್ಯ-ಸೂರ್ಯ ನಕ್ಷತ್ರಯೋಗ, ಕನ್ಯಾಂಗಾರಕ ದೋಷಗಳಿಂದ ಮಳೆಗೆ ಅಡ್ಡಿಯಿದ್ದು, ಶುಕ್ರ-ಶನಿಸ್ಥಿತಿ, ಬುಧೋದಯಗಳಿಂದ ಅತ್ಯಲ್ಪವಾದ ಖಂಡವೃಷ್ಟಿಯಾಗುವುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಆಗಸ್ಟ್ 31, ಸೆಪ್ಟಂ 1, 2, 5, 6, 10, 11, 12

### ಉಫ ಮಳೆ : ತಾ ॥ 13-09-23 ರಿಂದ 27-09-23 ರವರೆಗೆ

ಈ ಮಳೆಯು ಪೂರ್ಣಜಲ ಲಗ್ನದಲ್ಲಿ ಹುಟ್ಟುವುದರಿಂದಲೂ, ಸಮುದ್ರದಲ್ಲಿ ಪತನ, ಗ್ರಹಗಳ ನಾಡಿಸಂಚಾರ ಉತ್ತಮವಾಗಿರುವುದರಿಂದಲೂ, ಶುಕ್ರ-ಶನಿಸ್ಥಿತಿ, ಬುಧಾಸ್ತ ಮೊದಲಾದ ಸುಯೋಗಗಳಿಂದ ಕನ್ಯಾಂಗಾರಕ ದೋಷವಿದ್ದಾಗ್ಯೂ, ಸಾಧಾರಣವಾದ ಮಳೆಗೆ ಅವಕಾಶವಿದೆ. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಸೆಪ್ಟಂ 13, 14, 15, 16, 24, 25, 26

### ಹಸ್ತ ಮಳೆ : ತಾ ॥ 27-09-23 ರಿಂದ 11-10-23 ರವರೆಗೆ

ಪೂರ್ಣಜಲದಲ್ಲಿ ಹುಟ್ಟುವಿಕೆ, ಸಮುದ್ರದಲ್ಲಿ ಪತನ, ಶುಕ್ರ-ಶನಿಸ್ಥಿತಿ, ಬುಧಾಸ್ತ, ಗ್ರಹಗಳ ಅಮೃತ, ಜಲನಾಡಿಸಂಚಾರ ಕಾಲದಲ್ಲಿ, ಕನ್ಯಾಂಗಾರಕ ದೋಷನಿವೃತ್ತಿಯಿಂದ ಅಲ್ಪವಾದ ಮಳೆಯಾಗಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಸೆಪ್ಟಂ 27, 28, 29 ಅಕ್ಟೋ 3, 4, 7, 8, 9, 10

### ಚಿತ್ತೆ ಮಳೆ : ತಾ ॥ 11-10-23 ರಿಂದ 24-10-23 ರವರೆಗೆ

ಗ್ರಹಗಳ ನಾಡೀಸಂಚಾರ ಉತ್ತಮವಾಗಿಲ್ಲದಿರುವಿಕೆ, ಪಾದಜಲ ಲಗ್ನದಲ್ಲಿ ಹುಟ್ಟುವಿಕೆ, ಸಂಧಿಯಲ್ಲಿ ಪತನ, ಸ್ತ್ರೀ-ಸ್ತ್ರೀ ನಕ್ಷತ್ರಯೋಗ ಮೊದಲಾದವುಗಳಿಂದ ಮಳೆಗೆ ಹೆಚ್ಚು ತೊಂದರೆಯಿದ್ದು ಚಿತ್ತಾ ನಕ್ಷತ್ರ 2ನೇ ಪಾದ 3ನೇ ಪಾದದ ಅವಧಿಯಲ್ಲಿ ಅತ್ಯಲ್ಪವಾದ ಮಳೆ ಕಂಡುಬರುತ್ತದೆ. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಅಕ್ಟೋ 11, 12, 13, 14, 22, 23

### ಸ್ವಾತಿ ಮಳೆ : ತಾ ॥ 24-10-23 ರಿಂದ 06-11-23 ರವರೆಗೆ

ನಿರ್ಜಲ ಲಗ್ನದಲ್ಲಿ ಹುಟ್ಟುವಿಕೆ, ಸಂಧಿಯಲ್ಲಿ ಪತನ, ಗ್ರಹಗಳ ನಾಡೀಸಂಚಾರ, ಉತ್ತಮವಾಗಿಲ್ಲದಿರುವಿಕೆ, ಸೂರ್ಯ-ಸೂರ್ಯ ನಕ್ಷತ್ರಯೋಗ, ಸ್ತ್ರೀ-ನಪುಂಯೋಗ ಮೊದಲಾದವುಗಳಿಂದ ಮಳೆಯಾಗುವ ಅವಕಾಶ ಕಡಿಮೆಯಿದ್ದು, ಬುಧೋದಯ ಕಾಲದಲ್ಲಿ ಅಲ್ಪವಾದ ಮಳೆ ನಿರೀಕ್ಷಿಸಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ಅಕ್ಟೋ 24, 25, 26, 27, 30, 31, ನವಂ 4, 5

### ವಿಶಾಖ ಮಳೆ : ತಾ ॥ 06-11-23 ರಿಂದ 20-11-23 ರವರೆಗೆ

ಗ್ರಹಗಳನಾಡೀ ಸಂಚಾರ ಉತ್ತಮವಾಗಿಲ್ಲದಿರುವಿಕೆ, ಸಂಧಿಯಲ್ಲಿ ಪತನ, ಚಂದ್ರ-ಚಂದ್ರ ನಕ್ಷತ್ರಯೋಗ, ಸ್ತ್ರೀ-ಸ್ತ್ರೀ ಯೋಗ, ಶುಕ್ರನಕ್ಷತ್ರ ಸಂಚಾರ ಮೊದಲಾದವುಗಳಿಂದ ಮಳೆಗೆ ತೊಂದರೆಯಿದ್ದು 2 ಮತ್ತು 3ನೇ ಪಾದಗಳಲ್ಲಿ ಖಂಡವೃಷ್ಟಿಯಾಗಬಹುದು. ಮಳೆ ನಿರೀಕ್ಷಿಸಬಹುದಾದ ದಿನಗಳು : ತಾ ॥ ನವಂ 6, 7, 8, 9, 10, 18, 19

ವಿಶೇಷ ಸೂಚನೆ : ಮಳೆಗೆ ತೊಂದರೆ ಬರುವಕಾಲದಲ್ಲಿ ರುದ್ರಾಭಿಷೇಕ, ಪರ್ಜನ್ಯಜಪ, ವಿರಾಟಪರ್ವ ಭಾರತ ಪಠನ ಮೊದಲಾದ ಶಾಂತಿ ಕರ್ಮಗಳನ್ನಾಚರಿಸಿದಲ್ಲಿ ದೋಷ ಪರಿಹಾರವಾಗಿ ಸುಭಿಕ್ಷವೂ, ಸುವೃಷ್ಟಿಯೂ ಉಂಟಾಗುವುದೆಂದು ಮಂಗಳವು.

## ರಥೋತ್ಸವಾದಿಗಳು

ಸೂಚನೆ : ನಮ್ಮ ಪಂಚಾಂಗದಲ್ಲಿ ಆಯಾ ರಥೋತ್ಸವದ ಶಾಸ್ತ್ರ ನಿಯಮದಂತೆ ಆಯಾ ರಥೋತ್ಸವವನ್ನು ನಮೂದಿಸಿರುತ್ತೇವೆ. ಇತ್ತೀಚೆಗೆ ಪಂಚಾಂಗದಲ್ಲಿ ನಮೂದಿಸಿರುವ ದಿನ ಕೆಲವು ರಥೋತ್ಸವಗಳು ನಡೆಯುತ್ತಿಲ್ಲವೆಂದು ಕೆಲವು ಭಕ್ತಾದಿಗಳು ಪತ್ರ ಬರೆದಿರುತ್ತಾರೆ. ಆದ್ದರಿಂದ ಸಂಬಂಧಪಟ್ಟ ಅರ್ಚಕರಾಗಲೀ, ಆಗಮೀಕರಾಗಲೀ, ಹಿಂದಿನಿಂದ ಆಚರಿಸುತ್ತಿದ್ದ ರಥೋತ್ಸವಾದಿಗಳಲ್ಲಿ ಬದಲಾವಣೇ ಮಾಡಿದ್ದಲ್ಲಿ ಶಾಸ್ತ್ರ ಮಾಹಿತಿಯೊಂದಿಗೆ ನಮ್ಮ ಗಮನಕ್ಕೆ ತರುವುದರ ಮೂಲಕ ಭಕ್ತಾದಿಗಳಿಗಾಗುವ ತೊಂದರೆಯನ್ನು ತಪ್ಪಿಸಲು ಕೋರಿದೆ. ಭಕ್ತಾದಿಗಳು ರಥೋತ್ಸವಗಳ ಕಾರ್ಯಕ್ರಮವನ್ನು ಪೂರ್ವಭಾವಿಯಾಗಿ ತಿಳಿದುಕೊಂಡು ಭಾಗವಹಿಸಬೇಕಾಗಿ ಪ್ರಾರ್ಥನೆ.

2. ಆಯಾ ದಿನಗಳಲ್ಲಿ ಸೇರಿಸಲಾಗದಿದ್ದ ಕೆಲವು ರಥೋತ್ಸವಾದಿಗಳನ್ನು ಇಲ್ಲಿ ಕೊಡಲಾಗಿದೆ. ದಯವಿಟ್ಟು ಆಯಾ ದಿನಗಳಲ್ಲಿ ಸೇರಿಸಿ ಓದಿಕೊಳ್ಳಬೇಕಾಗಿ ಕೋರಿದೆ.

## ಚೈತ್ರ ಮಾಸೇ ಶುಕ್ಲ ಪಕ್ಷಃ

22-03-23 ನೀಲಕಂಠರುದ್ರ ಜಯಂತಿ. ಸಿರಿಗೆರೆಯಲ್ಲಿ ಪ್ರಭುಪಾದ್ಯಮೀ. ಬೆಂಗಳೂರು ಮಹಾಲಕ್ಷ್ಮೀಪುರ (ಮಂತಿರುಪತಿ) ಶ್ರೀನಿವಾಸ ವಜ್ರಾಂಗಿ ಉತ್ಸವ. ಹೊಳೇನರಸೀಪುರ ತಾ। ಬಾಗೇವಾಳು ರಾಮೇಶ್ವರ ಕರಗ. ಮಂಗಳೂರು ಗಣಪತಿ ಕಾಳಿಕಾಂಬಾ ಕ್ಷೇತ್ರದಲ್ಲಿ ಜಾತ್ರಾರಂಭ. 23-03-23 ಚಿಂತಾಮಣಿ ತಾ। ಕುರುಬೂರು ಭೂತೇಶ್ವರೀ ಜಾತ್ರೆ ಗುಬ್ಬಿಕೊಡಿಗೇನಹಳ್ಳಿ ದಂಡಿಮಾರಮ್ಮನ ಜಾತ್ರೆ, ಹಾಸನದ ದೊಡ್ಡಪುರದ ಉದ್ಭವ ರಾಮೇಶ್ವರ ರಥ. ಹೊನ್ನಾಳಿ ತಾ। ಕುರುವಗಡ್ಡೆ ರಾಮೇಶ್ವರ ರಥ. 26-03-23 ಕೋಲಾರದ ಕೋದಂಡರಾಮ ರಥ. ರಾಮೋಹಳ್ಳಿ ರಾಮಚಂದ್ರ ರಥ. ದೇವಾಂಗ ದಾಸಮಯ್ಯನವರ ಜಯಂತಿ. ದೇವಾಂಗ ದೇವಲ ಋಷಿಗಳ ಜಯಂತಿ. ಮುಳಬಾಗಿಲು ತಾ। ವಿರೂಪಾಕ್ಷಿ ಗ್ರಾಮದ ತ್ರಿಪುರಸುಂದರೀ ಜಾತ್ರೆ, ಗುಬ್ಬಿ ತಾ। ಹೊಸಕೆರೆ ಲಕ್ಷ್ಮೀರಂಗನಾಥ ರಥ. ಹೆಬ್ಬೂರು ಕೋದಂಡಾಶ್ರಮದ ಶ್ರೀಧರಾನಂದ ಸ್ವಾಮಿಗಳ ಆರಾಧನೆ. ದಾವಣಗೆರೆ ಚೌಕೀಪೇಟೆ ಬಕ್ಕೇಶ್ವರ ರಥ. 30-03-23 ಚಂದನಕೆರೆ ರಂಗನಾಥ ರಥ. ಅಮರಗಿರಿ ಬಿಕ್ಕೋನಹಳ್ಳಿ ರಂಗನಾಥ ರಥ. ಬೆಳ್ಳೂಡಿ, ಮಂಚಿ, ಹಳೇಭಾವಿಗಳಲ್ಲಿ ಆಂಜನೇಯ ರಥ. ಶಿವಮೊಗ್ಗಾ ಜಿ। ಸಂತೇಬೆನ್ನೂರು ರಾಮಚಂದ್ರ ರಥ. ಬೆಂಗಳೂರು B.V.K. ಅಯ್ಯಂಗಾರ್ ರಸ್ತೆ ಕೋದಂಡ ರಾಮಾಂಜನೇಯ ದೇವಾಲಯದಲ್ಲಿ ರಾಮೋತ್ಸವಾರಂಭ. ರಾಮಸ್ವಾಮಿ ಕಣಿವೆ ರಾಮಲಿಂಗೇಶ್ವರ ರಥ. ಹಂಪಿ ಮತ್ತು ಅಕ್ಕಯ್ಯಮ್ಮನ ಬೆಟ್ಟದಲ್ಲಿ ಭುವನೇಶ್ವರೀ ಜಗದಂಬಾ ಅವತಾರೋತ್ಸವ. ಹರಿಹರ ತಾ। ಕೊಕ್ಕನೂರು ಆಂಜನೇಯ ರಥ. ದೊಡ್ಡಬಳ್ಳಾಪುರ ತಾ। ದೊಡ್ಡತುಜ್ಜಾಜಿ ಕಾಶೀವಿಶ್ವನಾಥ ದೇವಾಲಯದಲ್ಲಿ ರಾಮೋತ್ಸವಾರಂಭ. ಚನ್ನಗಿರಿ ತಾ। ಕತ್ತಲಗೆರೆ ಆಂಜನೇಯ ರಥ. ತುಮಕೂರು ಜಿಲ್ಲೆ ಗುಬ್ಬಿ ತಾ। ಚೇಳೂರಿನಲ್ಲಿ ರಾಮೋತ್ಸವ. ಬೆಂಗಳೂರು ತಿಪ್ಪಗೊಂಡನಹಳ್ಳಿ ಸೀತಾರಾಮ ಕಲ್ಯಾಣೋತ್ಸವ. ಬೆಂಗಳೂರು ಬ್ಯಾಟರಾಯನ ಪುರದಲ್ಲಿ ರಾಮೋತ್ಸವ. 31-03-23 ಮುಳುಕುಂಟೆ ಅಗ್ರಹಾರದಲ್ಲಿ ರಾಮಪಟ್ಟಾಭಿಷೇಕ. ಕನ್ನಂಬಾಡೀ ಮಹಾಲಕ್ಷ್ಮೀ ರಥ. ಹೊಳಲ್ಕೆರೆ ತಾ। ಹಿರೇಎಮ್ಮಿಗನೂರು ಕಲ್ಲೇಶ್ವರ ರಥ. ಬೆಳಗಟ್ಟದ ಆಂಜನೇಯ ರಥ. ಬೆಂಗಳೂರು ಬ್ಯಾಟರಾಯನಪುರದ ಕೋದಂಡರಾಮ ರಥ. ತಿಪಟೂರು ತಾ। ಹೊನ್ನವಳ್ಳಿ ಕಾಲಭೈರವ ರಥ. ಮೈಸೂರು ಇರ್ವಿನ್‌ರಸ್ತೆ ಕಾಳಿಕಾಂಬಾ ಕಮಠೇಶ್ವರ ರತ್ನಮುಡೀ ಉತ್ಸವ. ತುಮಕೂರು ಜಿಲ್ಲೆ ಚಿಕ್ಕಕೊರಟಗೆರೆ ಕೆಂಪಮ್ಮದೇವೀ ರಥ. ರಾಮನಗರದ ರಾಮದೇವರ ರಥ. ಶಿರಾ ತಾ। ಕಳ್ಳಂಬೆಳ್ಳ ಹೋಬಳಿ ತಾಳಗುಂದ ಗ್ರಾಮದ ಸೀತಾರಾಮಾಂಜನೇಯ ರಥ. ತುಮಕೂರು ಜಿಲ್ಲೆ ಮಧುಗಿರಿ ತಾ। ಮೈದನ ಹಳ್ಳಿ ರಾಮದೇವರ ರಥ. ಬೆಂಗಳೂರು ತಿಪ್ಪಗೊಂಡನಹಳ್ಳಿ ಪ್ರಸನ್ನ ಆಂಜನೇಯ ದೇವಾಲಯದಲ್ಲಿ ಸೀತಾರಾಮ ರಥ. ಬೆಂಗಳೂರು ಬ್ಯಾಟರಾಯನ ಪುರದ ಆದಿಶಕ್ತಿ ಮಾರಿಕಾಂಬಾ ರಥ. ಬೆಂಗಳೂರು ಬ್ಯಾಟರಾಯನಪುರದ ಗಾಳಿ ಆಂಜನೇಯ ರಥ. ಅರಸೀಕೆರೆ ತಾ। ಹೊಳಲ್ಕೆರೆ ಪ್ರಸನ್ನ ರಾಮೇಶ್ವರ ರಥ. 02-04-23 ವಿಷ್ಣುದಮನೋತ್ಸವ. ಸಖರಾಯ ಪಟ್ಟಣದ ಲಕ್ಷ್ಮೀಕೇಶವ ಮತ್ತು ಶಕುನ ರಂಗನಾಥ ರಥ. ಸಾಗರನವಿಲೆ ನಾಗೇಶ್ವರ ರಥ. ಚಿಕ್ಕನಾಯ್ಕನಹಳ್ಳಿ ತಾ। ದಸೂಡಿ ಗ್ರಾಮದ ಆಂಜನೇಯ ರಥ. ಉತ್ತರ ಕನ್ನಡ ಜಿಲ್ಲೆ ಬನವಾಸಿ ಮಧುಕೇಶ್ವರ ರಥ. 03-04-23 ಪಂಪಾವಿರೂಪಾಕ್ಷ ಕಲ್ಯಾಣೋತ್ಸವ. ಮುಳಬಾಗಿಲು ತಾ। ಬೈರಕೂರು ಕೋದಂಡರಾಮ ರಥ. ಕಡೂರು ತಾ। ಗಿರಿಯಾಪುರದಲ್ಲಿ ಮೌನೇಶ್ವರಸ್ವಾಮಿ ಮತ್ತು ಕಾಳಿಕಮ್ಮನವರ ಕೆಂಡದಾರ್ಚನೆ. ಕೋಲಾರ ಜಿ। ಚಿಕ್ಕತಿರುಪತಿ ಪ್ರಸನ್ನ ವೆಂಕಟರಮಣ ರಥ. ಬೆಂಗಳೂರು ಉತ್ತರ ತಾ। ತಮ್ಮೇನಹಳ್ಳಿ ರೇಣುಕಾಯಲ್ಲಮ್ಮ ದೇವರ ಕರಗ. ತಿರುಮುಕ್ಕೂಡಲು ಅಗಸ್ತ್ಯೇಶ್ವರ ರಥ. ತಲಕಾಡು ವೈದ್ಯೇಶ್ವರ ರಥ. ಕೊಳ್ಳೇಗಾಲದ ಮರಳೇಶ್ವರ ರಥ. ಶಿವನಸಮುದ್ರದ ಸೋಮೇಶ್ವರ ರಥ. 04-04-23 ನೃಸಿಂಹ ಡೋಲೋತ್ಸವ. ಶಿವಭೈರವದಮನಕಾರೋಪಣಂ. 05-04-23 ಕೋಲಾರದ ವೆಂಕಟರಮಣ ರಥ. ಮೋತಕಪಲ್ಲಿ ಆಂಜನೇಯ ರಥ. ಯಾದಾಪುರದ ಜೇನುಕಲ್ಲು ಸಿದ್ಧೇಶ್ವರ ರಥ. ಶ್ರೀರಂಗಪಟ್ಟಣ ತಾ। ಮಹದೇವಪುರದ ಕಾಶೀವಿಶ್ವೇಶ್ವರ ರಥ. ಮೂಕನಹಳ್ಳಿ ಪಟ್ಟಣದ ಲಕ್ಷ್ಮೀನೃಸಿಂಹ ರಥ. ಚಿಕ್ಕಬಳ್ಳಾಪುರದ ಕೋದಂಡರಾಮ ರಥ. ಹಂಪೆಪಂಪಾಪತಿ ರಥ ಮತ್ತು ಚಂದ್ರಮೌಳೀಶ್ವರ ರಥ. ಹಾಸನ ಜಿ। ಪಾಳ್ಯದ ಲಕ್ಷ್ಮೀಜನಾರ್ದನ ರಥ. ದೇವರಹಳ್ಳಿ ಉಡುಗಿರಿ ರಂಗನಾಥ ರಥ. ಶಿಕಾರಿಪುರದ ಹುಚ್ಚರಾಯ ರಥ. ತಾಯಲೂರು ಕೋದಂಡರಾಮ ರಥ. ಮೇಲೂರು ಗಂಗಾದೇವೀ ರಥ ಮತ್ತು ಜಾತ್ರೆ ಗುಬ್ಬಿಕೊಡಿಗೇನಹಳ್ಳಿ, ಹುರಳಿಗ್ರಾಮ, ಕೆಲ್ಲೋಡುಗಳಲ್ಲಿ ಆಂಜನೇಯ ರಥ. ಹರಿಹರ ತಾ। ಕೊಮಾರನಹಳ್ಳಿ ಹೆಳವನಕಟ್ಟೆ ಲಕ್ಷ್ಮೀಕಾಂತ ರಥ. ಜಂಗಮಕೋಟೆ ಪ್ರಸನ್ನ ಗಂಗಾಧರ ರಥ. ಹೊಳಲ್ಕೆರೆ ಕಾಲಭೈರವೇಶ್ವರ ರಥ. ಕಡೂರು ತಾ। ಹೂವಿನಹಳ್ಳಿ ವೀರಭದ್ರಸ್ವಾಮಿ ರಥ. ಅರಸೀಕೆರೆ ತಾ। ಚಿಕ್ಕಹಲ್ಲೂರು ಬಿಳೀಕಲ್ಲು ಲಕ್ಷ್ಮೀರಂಗನಾಥ ರಥ. ದಾವಣಗೆರೆ ಹಳೇಪೇಟೆ ವೀರಭದ್ರ ರಥ. ತುಮಕೂರು ತಾ। ಮುಳುಕುಂಟೆ ಆಂಜನೇಯ ರಥ. ಚಿಂತಾಮಣಿ ತಾ। ಕೋನಕುಂಟ್ಲ ಲಕ್ಷ್ಮೀವೆಂಕಟರಮಣ ರಥ. ಪಂಗುನ್ಯುತ್ತರಂ. ತಿರುಮುಕ್ಕೂಡಲು ತೀರ್ಥೋತ್ಸವ. ಶ್ರೀರಂಗನಾಯಕೀ ಅಮ್ಮನವರ ಜಯಂತಿ. 06-04-23 ಮುಳಬಾಗಿಲು ಪ್ರಸನ್ನವಿಠಲ ನಾರಾಯಣ ರಥ. ಭದ್ರಾವತಿ ತಾ। ದಾನವಾಡಿ ಗ್ರಾಮದ ಗಿರಿರಂಗನಾಥ ರಥ. ಶ್ರೀನಿವಾಸಪುರ ತಾ। ಯಲ್ದೂರು ಕೋದಂಡರಾಮ ರಥ. ಸಿರಿಗೆರೆಯಲ್ಲಿ ಆನಗೋಡು ಮರುಳಸಿದ್ಧೇಶ್ವರ ರಥ ಮತ್ತು ಶಿವನ ಪಾದ ಜಾತ್ರೆ, ಹಾಸನ ತಾ। ಕೌಶಿಕದ ಲಕ್ಷ್ಮೀಕೇಶವ ರಥ. ಧಾರವಾಡ ಜಿಲ್ಲೆ ಹಾತೇನಹಳ್ಳಿ ಮಾರುತಿ (ಶಾಂತೇಶ) ರಥ. ತುಮಕೂರು ಬಡವನಹಳ್ಳಿ ಲಕ್ಷ್ಮೀರಂಗನಾಥ ರಥ. ಹರಿಹರದ ತೇರುಬೀದಿ ಕೋಟೆ ಕೇರಿ ಮಾರುತಿ ಜಯಂತಿ. ಗೌರೀಬಿದನೂರು ತಾ। ಚಿಂತಲಪಲ್ಲಿ ಆಂಜನೇಯ ರಥ. ಬೆಂಗಳೂರು ಕೆಂಗೇರಿ ಉಪನಗರದ ಸಂಪಿಗೆ ಶ್ರೀನಿವಾಸ ರಥ. ಚಿಕ್ಕಬಳ್ಳಾಪುರ ಜಿಲ್ಲೆ ಸಬ್ಬೇನಹಳ್ಳಿ ಗೀತಾಮಂದಿರದಲ್ಲಿ ಶಿವಯೋಗಿ ತಿಮ್ಮಪ್ಪರಾಯರ ಆರಾಧನೆ. ಕೋಲಾರ ಜಿಲ್ಲೆ ಮುಳಬಾಗಿಲು ತಾ। ಮುಡಿಯನೂರು ಶ್ರೀಭೂನೀಳಾ ಸಮೇತ ಲಕ್ಷ್ಮೀವೆಂಕಟೇಶ್ವರ ರಥ. ಚಿಕ್ಕಬಳ್ಳಾಪುರದ ಕೋದಂಡರಾಮ ಕೀಲುಕುದುರೆ ಉತ್ಸವ. ಚನ್ನರಾಯಪಟ್ಟಣ ತಾ। ನುಗ್ಗೇಹಳ್ಳಿ ಲಕ್ಷ್ಮೀನೃಸಿಂಹ ರಥ. ಮೇಲುಕೋಟೆ ಚೆಲುವರಾಯಸ್ವಾಮಿ ಜಯಂತಿ. ಶ್ರೀರಂಗಪಟ್ಟಣದ ಪ್ರಸನ್ನ ಗಂಗಾಧರ ರಥ.

## ಚೈತ್ರ ಮಾಸೇ ಕೃಷ್ಣ ಪಕ್ಷಃ

07-04-23 ಹಂಪೆ ಶ್ರೀಚಕ್ರತೀರ್ಥ ಕೋದಂಡರಾಮ ರಥ. ನೆಲಮಂಗಲ ತಾ। ಬಸವನಹಳ್ಳಿ ಲಕ್ಷ್ಮೀವೆಂಕಟರಮಣ ರಥ. ದೊಡ್ಡಬಳ್ಳಾಪುರ ತಾ। ಮಲ್ಲೋಹಳ್ಳಿ ರಂಗನಾಥ ರಥ. ಗುಬ್ಬಿ ತಾ। ಮಣೇಕುಪ್ಪೇ ಗ್ರಾಮದ ಆಂಜನೇಯ ರಥ. ಬೆಂಗಳೂರು ಗಿರಿನಗರದ ಲಕ್ಷ್ಮೀವೆಂಕಟೇಶ್ವರ ರಥ. 08-04-23 ಭಗವಾನ್ ಶ್ರೀಧರ ಆರಾಧನೆ. ಅಕ್ಕಿಹೆಬ್ಬಾಳು ಹೋಬಳಿ ಬದರಿಕಾಶ್ರಮದ ಸಂಗಮೇಶ್ವರ ರಥ. ಮಧುಗಿರಿ ತಾ। ತುರುವೇಕೆರೆ ರಂಗನಾಥಸ್ವಾಮಿ ಜಾತ್ರೆ. 10-04-23 ವಿದ್ಯಾಶ್ರೀಧರತೀರ್ಥರ ಆರಾಧನೆ. ಅಗಡಿ ಆನಂದವನದಲ್ಲಿ ಶೇಷಾಚಲ ಸ್ವಾಮಿಗಳ ಜಯಂತಿ. ಗುಲ್ಬರ್ಗಾ ಜಿಲ್ಲಾ ಸನ್ನತಿ ಚಂದ್ರಲಾದೇವೀ ರಥ. ವಿಜಾಪುರ ಜಿ। ಹುನುಗುಂದ ತಾ। ಕೂಡಲ ಸಂಗಮೇಶ್ವರ ರಥ. ಬೆಂಗಳೂರು ದಕ್ಷಿಣ ತಾ। ಬೇಗೂರು ಶ್ರೀನಾಗೇಶ್ವರ ರಥ. 11-04-23 ಟಿ. ನರಸೀಪುರ ತಾ। ಕೃಷ್ಣಾಪುರದ ಶ್ರೀರಾಮಾನುಜ ಬ್ರಹ್ಮತಂತ್ರ ಪರಕಾಲಸ್ವಾಮಿಗಳ ಆರಾಧನೆ. 12-04-23 ಸಿರಿಗೆರೆ ಕಾಶೀಮಹಾಲಿಂಗಸ್ವಾಮಿಗಳ ನಿಜೈಕ್ಯದಿನ. ಚಿಂತಾಮಣಿ ತಾ। ಆಟ್ಟೂರು ಲಕ್ಷ್ಮೀನೃಸಿಂಹ ರಥ. ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾ। ಹಾಲುತ್ತೂರು ಲೋಕಪರಮೇಶ್ವರೀ ರಥ. ದ.ಕ. ಜಿಲ್ಲೆ ಕಮಲ ಶಿಲಾಕ್ಷೇತ್ರದ ದುರ್ಗಾಪರಮೇಶ್ವರೀ ರಥ. ಕಲ್ಲೇದೇವರಪುರದ ಕಲ್ಲೇಶ್ವರ ರಥ.

## ವೈಶಾಖ ಮಾಸೇ ಶುಕ್ಲ ಪಕ್ಷಃ

21-04-23 ಹೆಬ್ಬೂರು ಕೋದಂಡಾಶ್ರಮದಲ್ಲಿ ಶಂಕರ ಜಯಂತ್ಯುತ್ಸವಾರಂಭ.
22-04-23 ಚೆನ್ನಗಿರಿ ಕೋಟೆ ರಂಗನಾಥ ರಥ. ತೀರ್ಥಹಳ್ಳಿ ತಾ। ಆರುಣಗಿರಿ ಲಕ್ಷ್ಮೀವೆಂಕಟೇಶ ರಥ. ಕಾಮಲಾಪುರದ ಈಶ್ವರ ದೇವರ ರಥ. 23-04-23 ಶಿವಮೊಗ್ಗ ಟೌನ್ ಸಂಜೀವ ಆಂಜನೇಯ ರಥ. ಬೆಂಗಳೂರು ಆವನಿ ಶೃಂಗೇರಿ ಶಾಖಾ ಮಠದಲ್ಲಿ ಶ್ರೀಗಣೇಶ – ಶಾರದಾ – ಶಂಕರ ವಿಗ್ರಹ ಪ್ರತಿಷ್ಠಾವರ್ಧಂತಿ. ಹಂಪಿ ಶ್ರೀಮಲಯಾಳ ಬ್ರಹ್ಮ (ಸಿಂಗಭಟ್ಟರ) ಆರಾಧನೆ. ಕೂಡಲ ಸಂಗಮದಲ್ಲಿ ಬಸವ ಜಯಂತಿ. ಸಿರಿಗೆರೆ ಶಿವಕುಮಾರ ಶಿವಾಚಾರ್ಯರ ಜಯಂತಿ ಮತ್ತು ಬಸವ ಜಯಂತಿ. 25-04-23 ಉಜ್ಜನಿ ಸಿದ್ಧಲಿಂಗೇಶ್ವರ ರಥ. ಕ್ಯಾತಂದ್ರದ ಶ್ರೀವಿದ್ಯಾಶಂಕರ ದೇವಾಲಯದಲ್ಲಿ ಶ್ರೀಶಂಕರ ಜಯಂತಿ. ಬೆಂಗಳೂರು ಕೃಷ್ಣರಾಜಪುರದ ಶ್ರೀಗಾಯತ್ರೀ ಅಮ್ಮನವರ ರಥ. ಶ್ರೀಗಾಯತ್ರೀ ಜಯಂತಿ. ಗುಡಿಬಂಡೆ ತಾ। ಸೋಮೇನಹಳ್ಳಿ ಲಕ್ಷ್ಮೀವೆಂಕಟರಮಣ ರಥ. ಹೆಬ್ಬೂರು ಕೋದಂಡಾಶ್ರಮದಲ್ಲಿ ಚಂಡೀಹೋಮ. ಶ್ರೀಭಾವನಾಮಹರ್ಷಿ ಜಯಂತಿ. ಬಾರಂದೂರು ಬ್ರಹ್ಮಾನಂದ ಯೋಗಾಶ್ರಮದಲ್ಲಿ ಶಂಕರ ಜಯಂತಿ. ಕೊಳ್ಳೇಗಾಲದ ಸುಬ್ರಹ್ಮಣ್ಯ ದೇವಾಲಯದಲ್ಲಿ ನವಗ್ರಹ ವರ್ಧಂತಿ. 27-04-23 ಚನ್ನಪಟ್ಟಣ ಕೋಟೆ ಪ್ರಸನ್ನ ರಾಮದೇವರ ರಥ. ಆಂಧ್ರದ ನಾರಾಯಣಪೇಟೆ ಶ್ರೀಬ್ರಹ್ಮಾನಂದ ಸರಸ್ವತೀ ಮಹಾರಾಜರ ಆರಾಧನಾ ಮಹೋತ್ಸವ. ತುಮಕೂರು ಜಿಲ್ಲೆ ಮಧುಗಿರಿ ತಾ। ಗೊಂದಿಹಳ್ಳಿ ಆಂಜನೇಯ ರಥ. ಶ್ರೀರಂಗಪಟ್ಟಣದ ರಂಗಸ್ವಾಮಿ ಜಯಂತಿ.

03-05-23 ಹೊನ್ನಾಳಿ ತಾ। ರಾಂಪುರದ ಸದ್ಗುರು ಹಾಲಸ್ವಾಮಿಗಳ ಪುಣ್ಯತಿಥಿ. ತುಮಕೂರು ಜಿಲ್ಲೆ ಕೊರಟಗೆರೆ ಸುವರ್ಣಮುಖೀ ಲಕ್ಷ್ಮೀನರಸಿಂಹಸ್ವಾಮಿ ಕಲ್ಯಾಣೋತ್ಸವ. ಮುಳಬಾಗಿಲು ಆಂಜನೇಯ ರಥ. 04-05-23 ಗುಬ್ಬಿ ತಾ। ಕುಣಾಘಟ್ಟದಲ್ಲಿ ನೃಸಿಂಹ ಜಯಂತಿ. ಕುಣಿಗಲ್ ತಾ। ಅಮೃತೂರು ರಾಮೇಶ್ವರ ದೇವಾಲಯದಲ್ಲಿ ಗಿರಿಜಾಕಲ್ಯಾಣೋತ್ಸವ. ಭದ್ರಾವತಿ ಲಕ್ಷ್ಮೀನೃಸಿಂಹಸ್ವಾಮಿ ಕಲ್ಯಾಣೋತ್ಸವ. ಬೆಂಗಳೂರು ಬನಶಂಕರಿ 2ನೇ ಹಂತದ ಲಕ್ಷ್ಮೀನೃಸಿಂಹಸ್ವಾಮಿ ಅಡ್ಡಪಲ್ಲಕ್ಕಿ ಉತ್ಸವ. ಕೋಲಾರ ಜಿಲ್ಲೆ ಗೌರೀಬಿದನೂರು ತಾ। ನುಲುಗುಮ್ಮನ ಹಳ್ಳಿ ಲಕ್ಷ್ಮೀವೆಂಕಟರಮಣ ಕಲ್ಯಾಣೋತ್ಸವ. ತುರುವೇಕೆರೆ ಅಚಲಾನಂದಮಠದಲ್ಲಿ ನೃಸಿಂಹ ಜಯಂತಿ. ಸಂಪಿಗೆ ರಥೋತ್ಸವ. ಕೊಳ್ಳೇಗಾಲದ ವಿಶ್ವೇಶ್ವರ ರಥ. ಮಧುರ ಕವಿಯಾಳ್ವಾರ್ ತಿರುನಕ್ಷತ್ರ. 05-05-23 ಕೋಲಾರ ಜಿಲ್ಲೆ ದೇವರ ಗುಡಿಪಲ್ಲಿ ಗಡಿದಂ ವೆಂಕಟರಮಣ ರಥ ಮತ್ತು ಜಾತ್ರೆ, ಕುಣಿಗಲ್ ತಾ। ಅಮೃತೂರು ರಾಮೇಶ್ವರ ರಥ. ಹೊಸಕೋಟೆ ಶ್ರೀದ್ರೌಪದಮ್ಮನವರ ಪಲ್ಲಕ್ಕಿ ಉತ್ಸವ ಮತ್ತು ಅವಿಮುಕ್ತೇಶ್ವರ ರಥ ಮತ್ತು ಕರಗ. ಧರ್ಮಪುರಿ ತಾ ಥಳಿಗ್ರಾಮದ ವೇಣುಗೋಪಾಲ ರಥ. ಭದ್ರಾವತಿ ಲಕ್ಷ್ಮೀನೃಸಿಂಹ ರಥ. ಅರಕಲಗೂಡು ತಾ। ಕೇರಳಾಪುರದ ಶ್ರೀನಿವಾಸ ಆಂಜನೇಯ ರಥ. ಬೆಂಗಳೂರು ಸಿಟಿ ಕತ್ತರಿಗುಪ್ಪೆ 2A ಕ್ರಾಸ್‌ನಲ್ಲಿರುವ ಶ್ರೀಸತ್ಯನಾರಾಯಣ ಸ್ವಾಮಿ ಕುಂಭಾಭಿಷೇಕ ಮತ್ತು ರಥ. ಬೆಂಗಳೂರು T. ದಾಸರಹಳ್ಳಿ ಭುವನೇಶ್ವರೀ ನಗರದ ಪ್ರಸನ್ನ ಗಂಗಾಧರ ರಥ. ಅರ್ಧನಾರೀಶ್ವರ ವ್ರತ. ಚಿಕ್ಕನಾಯ್ಕನಹಳ್ಳಿ ಬ್ರಹ್ಮಪುರಿ ಆಂಜನೇಯ ರಥ. ಕ್ಯಾತಂದ್ರದ ಚಂದ್ರಮೌಳೀಶ್ವರ ವರ್ಧಂತಿ. ತಲಕಾಡು ವೈದ್ಯೇಶ್ವರ ಜಯಂತಿ ಹೊಸಹೊಳಲು ಲಕ್ಷ್ಮೀನಾರಾಯಣ ಗರುಡೋತ್ಸವ. ನಾಗಮಂಗಲದ ಯೋಗಾನರಸಿಂಹ ರಥ. ಬೆಂಗಳೂರು ನಗರ್ತ ಪೇಟೆ ನಗರೇಶ್ವರ ರಥ. ಚಿತ್ರದುರ್ಗದ ತ್ಯಾಗರಾಜ ಬೀದಿ ಪಾಂಡುರಂಗ ರಥ. ಪಾಯಲುಬಂಡೆ ಲಕ್ಷ್ಮೀರಂಗನಾಥ ರಥ. ಸಾಗರ ತಾ। ಸಿರಿವಂತೆ ತ್ರಿಪುರಾಂತಕೇಶ್ವರ ರಥ. ಕಡೂರು ತಾ। ಸಿಂಗಟಗೆರೆ ತ್ರಿಪುರಾಂತಕೇಶ್ವರ ರಥ. ಅಕ್ಕಿರಾಂಪುರದ ಲಕ್ಷ್ಮೀವೆಂಕಟರಮಣ ರಥ. ಅತ್ತಿಬೆಲೆ ಪ್ರಸನ್ನ ನಂಜುಂಡೇಶ್ವರ ರಥ. ರಾಮನಗರ ಬಳಿ ರೇವಣ ಸಿದ್ಧೇಶ್ವರ ಬೆಟ್ಟದ ಜಾತ್ರೆ, ಶ್ರೀರಾಘವೇಂದ್ರ ತೀರ್ಥರ ಆರಾಧನೆ.

## ಆಷಾಢ ಮಾಸೇ ಶುಕ್ಲ ಪಕ್ಷಃ

30-06-23 ವಾಮನಪೂಜನಂ. ಚಿಕ್ಕನಾಯ್ಕನಹಳ್ಳಿ ತಾ। ಹಳೆಯೂರು ಆಂಜನೇಯ ರಥ. ಶ್ರೀಮಾರೇಕಲ್ಲು ತಿರುಪತಿ ವೆಂಕಟರಮಣ ರಥ. ಮಧುಗಿರಿ ತಾ। ಗುಟ್ಟಕೊಡಿಗೇನಹಳ್ಳಿ ಲಕ್ಷ್ಮೀನೃಸಿಂಹ ರಥ. ಮಧುಗಿರಿ ತಾ। ದೊಡ್ಡದಾಳವಾಟದಲ್ಲಿ ಲಕ್ಷ್ಮೀನೃಸಿಂಹ ರಥ. ಗುಬ್ಬಿ ತಾ। ಮೂಗನಾಯ್ಕನಕೋಟೆ ಲಕ್ಷ್ಮೀರಂಗನಾಥ ರಥ. ಶಿರಾ ತಾ। ಬುಕ್ಕಾಪಟ್ಟಣದ ಪ್ರಸನ್ನ ನಾಟ್ಯಗಣಪತಿ ರಥ. ಲಿಂಗಾನಂದಸ್ವಾಮಿಗಳ ಪುಣ್ಯತಿಥಿ.

## ನಿಜ ಶ್ರಾವಣ ಮಾಸೇ ಶುಕ್ಲ ಪಕ್ಷಃ

29-08-23 ವಿಖನಸಾಚಾರ್ಯರ ತಿರುನಕ್ಷತ್ರ ಸುತ್ತೂರು ಜಗದ್ಗುರು ಶಿವರಾತ್ರಿ

## ತರ್ಪಣ ವಿಚಾರ

ಪಿತೃಗಳ ಪ್ರೀತ್ಯರ್ಥವಾಗಿ ತಿಲಾಂಜಲಿಯನ್ನು ಅರ್ಪಿಸುವ ಕರ್ಮಕ್ಕೆ ತರ್ಪಣ ವೆನ್ನುವರು. ತರ್ಪಣವನ್ನು ಮಾಡುವಾಗ ಪವಿತ್ರವನ್ನು ಅವಶ್ಯವಾಗಿ ಧರಿಸಬೇಕು.

ಪಿತೃತರ್ಪಣಕ್ಕೆ ಉಕ್ತವಾದ ಕಾಲ ಅಪರಾಹ್ನ, ಪಿತೃ ತರ್ಪಣವನ್ನು ಮಾಡುವಾಗ ಜನಿವಾರವನ್ನು (ಎಡಗಡೆ) ಪ್ರಾಚೀನಾವೀತಿ ಹಾಕಿಕೊಂಡು ಎಡಗೈಯಲ್ಲಿ ನೀರಿನ ಪಾತ್ರೆ ಹಿಡಿದು ಬಲಗೈಯಲ್ಲಿ ಅಪಸವ್ಯವಾಗಿ ನೀರು ಹರಿಯುವಂತೆ ಪ್ರತಿಯೊಂದು ಪಿತೃದೇವತೆಗಳಿಗೂ ಮೂರು ಸಲ (3) ಅಂಜಲಿ ತರ್ಪಣ ಮಾಡಬೇಕು.

ತರ್ಪಣವನ್ನು ಈ ಕೆಳಕಂಡ ಸಂದರ್ಭದಲ್ಲಿ ಆಚರಿಸಬೇಕು :

(1) ಅಮಾವಾಸ್ಯೆ ಮತ್ತು ಸಾಧಾರಣ ಸಂಕ್ರಮಣ ಕಾಲಗಳಲ್ಲಿ ತರ್ಪಣ.

(2) ಗ್ರಹಣ, ಅರ್ಧೋದಯ, ಮಹೋದಯ ಪುಣ್ಯಕಾಲಗಳು. ದಕ್ಷಿಣಾಯನ, ಉತ್ತರಾಯಣ ಪುಣ್ಯಕಾಲಗಳಲ್ಲಿ ತರ್ಪಣ. ಮಹಾಲಯ ಪಕ್ಷದಲ್ಲಿ ತರ್ಪಣ ಹಾಗೂ ತೀರ್ಥಕ್ಷೇತ್ರಗಳಿಗೆ ಹೋದಾಗ ತರ್ಪಣ.

ಒಂದೇ ದಿನದಲ್ಲಿ ಎರಡು ಕಾರಣಗಳಿಂದಾಗಿ ಎರಡು ಸಲ ತರ್ಪಣ ಮಾಡಬಾರದು. ಒಂದೇ ತರ್ಪಣ ಮಾಡಬೇಕು. ಹೇಗೆಂದರೆ

(1) ಅಮಾವಾಸ್ಯೆ, ಸಂಕ್ರಮಣ ಒಂದೇ ದಿನ ಬಂದಾಗ ಅಮಾವಾಸ್ಯೆ ತರ್ಪಣ ಮಾತ್ರ ಮಾಡಬೇಕು. (2) ದಕ್ಷಿಣಾಯನ, ಉತ್ತರಾಯಣ ಪುಣ್ಯಕಾಲಗಳು ಅಮಾವಾಸ್ಯೆಯಲ್ಲಿ ಬಂದರೆ ಆಯನ ಪುಣ್ಯಕಾಲಗಳ ತರ್ಪಣ ಮಾಡಬೇಕು. (3) ಗ್ರಹಣ ಮತ್ತು ದಕ್ಷಿಣೋತ್ತರ ಪುಣ್ಯಕಾಲವು ಒಂದೇ ದಿನ ಬಂದರೆ ಗ್ರಹಣ ನಿಮಿತ್ತ ತರ್ಪಣ ಮಾಡಬೇಕು. (4) ಉತ್ತರಾಯಣ ಪುಣ್ಯಕಾಲ, ಅರ್ಧೋದಯ, ಮಹೋದಯ ಪುಣ್ಯಕಾಲಗಳು ಒಂದೇ ದಿನ ಬಂದರೆ, ಅರ್ಧೋದಯ, ಮಹೋದಯ ಪುಣ್ಯಕಾಲಗಳ ತರ್ಪಣ ಮಾಡಬೇಕು. (5) ಚಂದ್ರಗ್ರಹಣದಲ್ಲಿ ಗ್ರಹಣ ಮಧ್ಯ ಕಾಲಾನಂತರವೂ, ಸೂರ್ಯ ಗ್ರಹಣದಲ್ಲಿ ಗ್ರಹಣ ಮಧ್ಯಕಾಲಕ್ಕೆ ಮೊದಲೂ ತರ್ಪಣ ಮಾಡಬೇಕು. (6) ಸಂಕ್ರಮಣ ಒಂದೇ ಇದ್ದಾಗ ಸಂಕ್ರಮಣ ಪುಣ್ಯಕಾಲದಲ್ಲಿ ತರ್ಪಣ ಮಾಡಬೇಕು.

ಗಮನಿಸಬೇಕಾದ ಅಂಶಗಳು :

1) ಗೃಹದಲ್ಲಿ ತಿಲತರ್ಪಣ ನಿಷಿದ್ಧ : ಮನೆಯಲ್ಲಿ ತಿಲತರ್ಪಣ ಮಾಡಬಾರದು. ಮನೆಯ ಹೊರಗಿನ ಅಂಗಳ ಅಥವಾ ತುಳಸೀಕಟ್ಟೆ ಹತ್ತಿರ ಮಾಡುವ ಪದ್ಧತಿಯಿದೆ.

2) ತಂದೆಯಿರುವವರು (ಜೀವಂತಪಿತೃ) ತರ್ಪಣ ಕೊಡಬಾರದು.

3) ಅಮಾವಾಸ್ಯೆ, ಗ್ರಹಣ, ಅರ್ಧೋದಯ, ಮಹೋದಯ ಪುಣ್ಯಕಾಲಗಳು, ಆಯನ, ಸಂಕ್ರಮಣಗಳಲ್ಲಿ ದ್ವಾದಶ (12) ಪಿತೃಗಳಿಗೆ ಮಾತ್ರ ತರ್ಪಣ ಕೊಡಬೇಕು. ಸರ್ವಪಿತೃಗಳಿಗೂ ತರ್ಪಣ ಕೊಡಬೇಕಾಗಿಲ್ಲವೆಂದೂ, ಸಾಧಾರಣ ಸಂಕ್ರಮಣ ಮತ್ತು ಅಮಾವಾಸ್ಯೆಗಳಲ್ಲಿ ದ್ವಾದಶ ಪಿತೃಗಳಿಗೂ ಉಳಿದ ಸಂದರ್ಭಗಳಲ್ಲಿ ಸರ್ವಪಿತೃಗಳಿಗೂ ತರ್ಪಣ ಕೊಡಬೇಕೆಂದೂ, ಅಭಿಪ್ರಾಯ ಭೇದಗಳಿರುವುದರಿಂದ ಅವರವರ ಸಂಪ್ರದಾಯದಂತೆ ಆಚರಿಸತಕ್ಕದ್ದು.

4) ಮಹಾಲಯ ಪಕ್ಷ ಮತ್ತು ಪುಣ್ಯಕ್ಷೇತ್ರಗಳಲ್ಲಿ ಸರ್ವಪಿತೃಗಳಿಗೂ ತರ್ಪಣ ಕೊಡಬೇಕು.

5) ಮೊದಲು ಸಂಬಂಧ, ನಂತರ ಹೆಸರು, ನಂತರ ಗೋತ್ರ, ನಂತರ ರೂಪ ಹೇಳಿ ತರ್ಪಣ ಬಿಡಬೇಕು.

6) ಸುಮಂಗಲಿಯರಿಗೆ 'ದೇವಿ' ಎಂದೂ, ವಿಧವೆಯರಿಗೆ 'ಕವಿ' ಎಂದೂ ಹೇಳಿ ತರ್ಪಣ ಬಿಡಬೇಕು.

7) ಮಾತೃ, ಪಿತಾಮಹೀ, ಪ್ರಪಿತಾಮಹೀ ಈ ಮೂರು ವರ್ಗಕ್ಕೆ ಬಿಟ್ಟು ಉಳಿದ ಸ್ತ್ರೀಯರಿಗೆ ಒಂದೇ ಸಲ ತರ್ಪಣ ಕೊಡಬೇಕು.

8) ಉಳಿದವರಿಗೆ ಅವರವರ ಸೂತ್ರಾನುಸಾರ ಹೇಳಿರತಕ್ಕ ಸಂಖ್ಯೆಯಲ್ಲಿ ತರ್ಪಣ ನಡೆಸಬೇಕು.

9) ದ್ವಾದಶ ಪಿತೃ ತರ್ಪಣ ಕೊಡುವಾಗ : ಉದಾಹರಣೆ

ಅಸ್ಮತ್ ಪಿತರಂ (ತಂದೆ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ

ಅಸ್ಮತ್ ಪಿತರಂ (ತಂದೆ) .......... ಶರ್ಮಾಣಂ ..........

ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ

ಅಸ್ಮತ್ ಪಿತರಂ (ತಂದೆ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ

ಎಂದು ಹೇಳಿ ತರ್ಪಣ ಬಿಡುವ ಪದ್ಧತಿಯಿರುವುದರಿಂದ ಅವರವರ ಸೂತ್ರಾನುಸಾರ ನಡೆಸಬಹುದು.

1. ಅಮಾವಾಸ್ಯೆ ಮತ್ತು ಸಾಧಾರಣ ಸಂಕ್ರಮಣ ಪುಣ್ಯಕಾಲಗಳಲ್ಲಿ ಆಚರಿಸತಕ್ಕ ದ್ವಾದಶ ಪಿತೃ ತರ್ಪಣ ಕ್ರಮ :

ಆಚಮನ ಮಾಡಿ, ಮೂರು (3) ದರ್ಭೆಯಿಂದ ಕಟ್ಟಿದ ಪವಿತ್ರ ಧರಿಸಿ, ಅನಂತರ ಪ್ರಾಣಾಯಾಮ ಮಾಡಿ ಈ ರೀತಿ ಸಂಕಲ್ಪ ಮಾಡಬೇಕು.

ಸಂಕಲ್ಪ : (ದೇಶಕಾಲೌಸಂಕೀರ್ತ್ಯ)- ಶ್ರೀ ಗೋವಿಂದ ಗೋವಿಂದ ಮಹಾವಿಷ್ಣೋರಾಜ್ಞಯಾ ಪ್ರವರ್ಧಮಾನಸ್ಯ. ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮ ಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ ಶ್ರೀ .......... ನಾಮ ಸಂವತ್ಸರೇ (ಆಯಾ ಸಂವತ್ಸರದ ಹೆಸರು) .......... ಅಯನೇ (ಆ ಕಾಲದ ಆಯನದ ಹೆಸರು) .......... ಋತೌ (ಆ ಕಾಲದ ಋತುವಿನ ಹೆಸರು) .......... ಮಾಸೇ (ಆ ಮಾಸದ ಹೆಸರು) .......... ಪಕ್ಷೇ (ಶುಕ್ಲ ಅಥವಾ ಕೃಷ್ಣ ಪಕ್ಷ) .......... ತಿಥೌ (ಆ ದಿನದ ತಿಥಿ) .......... ವಾಸರೇ [ಆ ದಿನದ ಹೆಸರು, ಭಾನು (ರವಿ), ಸೋಮ (ಇಂದು), ಮಂಗಳ (ಭೌಮ), ಬುಧ (ಸೌಮ್ಯ), ಗುರು (ಬೃಹಸ್ಪತಿ), ಶುಕ್ರ (ಭಾರ್ಗವ), ಶನಿ (ಸ್ಥಿರ)] ವಿಷ್ಣು ನಕ್ಷತ್ರ, ವಿಷ್ಣುಯೋಗ, ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತಿ (ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು).

ಅಸ್ಮತ್ ಪಿತ್ರಾದಿ ದ್ವಾದಶ ಪಿತೄಣಾಂ ಅಕ್ಷಯ ಪುಣ್ಯ ಲೋಕಾವಾಪ್ತ್ಯರ್ಥಂ ಅಮಾವಾಸ್ಯಾಯಾಂ / ಸಂಕ್ರಮಣ ಪುಣ್ಯಕಾಲೇ ಶ್ರಾದ್ಧ ಪ್ರತಿನಿಧಿ ಸದ್ಯಃ ತಿಲತರ್ಪಣಂ ಆಚರಿಷ್ಯೆ.

ತಿಲೋದಕದಿಂದ ಈ ಕೆಳಗಿನವರುಗಳಿಗೆ ಅವರವರ ಹೆಸರು, ಗೋತ್ರ, ರೂಪಗಳನ್ನು ಹೇಳಿಕೊಂಡು ಮೂರು (3) ಸಲ ತರ್ಪಣ ಕೊಡಬೇಕು.

1. ಅಸ್ಮತ್ ಪಿತರಂ (ತಂದೆ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

2. ಅಸ್ಮತ್ಪಿತಾಮಹಂ (ತಾತ) .......... ಶರ್ಮಾಣಂ .......... ಗೋತ್ರಂ ರುದ್ರರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

3. ಅಸ್ಮತ್ ಪ್ರಪಿತಾಮಹಂ (ಮುತ್ತಾತ) .......... ಶರ್ಮಾಣಂ .......... ಗೋತ್ರಂ ಆದಿತ್ಯರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

4. ಅಸ್ಮನ್ ಮಾತರಂ (ತಾಯಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

5. ಅಸ್ಮತ್ ಪಿತಾಮಹೀಂ (ತಂದೆಯ ತಾಯಿ) .......... ದೇವಿದಾಂ / ಕವಿದಾಂ .................. ಗೋತ್ರಾಂ ರುದ್ರರೂಪಾಂ

ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

6. ಅಸ್ಮತ್ ಪ್ರಪಿತಾಮಹೀಂ (ತಂದೆ ಅಜ್ಜಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ಆದಿತ್ಯರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

6(a) ಬಲತಾಯಿ ವಿಚಾರದಲ್ಲಿ

ಅಸ್ಮತ್ ಸಪತ್ನಮಾತರಂ .......... ದೇವಿದಾಂ/ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

7. ಅಸ್ಮನ್ಮಾತಾಮಹಂ (ತಾಯಿಯ ತಂದೆ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

8. ಅಸ್ಮನ್ಮಾತುಃ ಪಿತಾಮಹಂ (ತಾಯಿಯ ತಾತ) .......... ಶರ್ಮಾಣಂ .......... ಗೋತ್ರಂ ರುದ್ರರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

9. ಅಸ್ಮನ್ಮಾತುಃ ಪ್ರಪಿತಾಮಹಂ (ತಾಯಿಯ ಮುತ್ತಾತ) .......... ಶರ್ಮಾಣಂ .......... ಗೋತ್ರಂ ಆದಿತ್ಯರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

10. ಅಸ್ಮನ್ಮಾತಾಮಹೀಂ (ತಾಯಿಯ ತಾಯಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

11. ಅಸ್ಮನ್ಮಾತುಃ ಪಿತಾಮಹೀಂ (ತಾಯಿಯ ಅಜ್ಜಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ರುದ್ರ ರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

12. ಅಸ್ಮನ್ಮಾತುಃ ಪ್ರಪಿತಾಮಹೀಂ (ತಾಯಿಯ ಮುತ್ತಜ್ಜಿ) .......... ದೇವಿದಾಂ/ ಕವಿದಾಂ .......... ಗೋತ್ರಾಂ ಆದಿತ್ಯರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

ಯಸ್ಯ ಸ್ಮೃತ್ಯಾ ಚನಾಮೋಕ್ತ್ಯಾತಪೋಯಜ್ಞ ಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ । ಯತ್ಕೃತಂ ತು ಮಯಾದೇವ ಪರಿಪೂರ್ಣಂ ತದಸ್ತುಮೇ।

ಅನೇನ ಮಯಾ ಅಮಾವಾಸ್ಯಾಯಾಂ / ಸಂಕ್ರಮಣ ಪುಣ್ಯಕಾಲೇ ಕೃತೇನ ತಿಲತರ್ಪಣೇನ ಶ್ರೀಮಜ್ಜನಾರ್ದನ ವಾಸುದೇವಃ ಪ್ರಿಯತಾಂ ಪ್ರೀತೋ ವರದೋ ಭವತು ॥ ಎಂದು ಹೇಳಿ ಅಂಗೈಯಲ್ಲಿ ನೀರು ಹಾಕಿಕೊಂಡು ಬಿಡಬೇಕು.

ಮಧ್ಯೇ ಮಂತ್ರ, ತಂತ್ರ, ಸ್ವರ, ವರ್ಣ, ಧ್ಯಾನ, ನೇಮ. ಲೋಪ ದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರ ಜಪಂ ಕರಿಷ್ಯೆ ।

ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ॥ (ದ್ವಿರಾವರ್ತಿ) ಅಚ್ಯುತಾನಂತ ಗೋವಿಂದೇಭ್ಯೋನಮಃ ॥

ಕಾಯೇನವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ । ಎಂದು ಹೇಳಿ ನೀರು ಬಿಡುವುದು.

॥ ಶ್ರೀ ಕೃಷ್ಣಾರ್ಪಣಮಸ್ತು ॥

**2. ಗ್ರಹಣ, ಅರ್ಧೋದಯ, ಮಹೋದಯ ಪುಣ್ಯಕಾಲ, ದಕ್ಷಿಣಾಯನ, ಉತ್ತರಾಯಣ ಪುಣ್ಯಕಾಲ, ಪಿತೃಪಕ್ಷ(ಮಹಾಲಯ ಪಕ್ಷ) ಮತ್ತು ತೀರ್ಥ ಕ್ಷೇತ್ರಗಳಲ್ಲಿ ಸರ್ವಕಾರುಣ್ಯ ಪಿತೃಗಳಿಗೂ ಕೊಡತಕ್ಕತರ್ಪಣ ಕ್ರಮ :**

ಆಚಮನ ಮಾಡಿ, ಮೂರು (3) ದರ್ಭೆಯಿಂದ ಕಟ್ಟಿದ ಪವಿತ್ರ ಧರಿಸಿ, ಅನಂತರ ಪ್ರಾಣಾಯಾಮ ಮಾಡಿ ಈ ರೀತಿ ಸಂಕಲ್ಪ ಮಾಡಬೇಕು.

ಸಂಕಲ್ಪ : (ದೇಶಕಾಲೌಸಂಕೀರ್ತ್ಯ) ಶ್ರೀ ಗೋವಿಂದ ಗೋವಿಂದ ಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮ ಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ ಶ್ರೀ .......... ನಾಮ ಸಂವತ್ಸರೇ (ಆಯಾ ಸಂವತ್ಸರದ ಹೆಸರು) .......... ಅಯನೇ (ಆ ಕಾಲದ ಅಯನದ ಹೆಸರು) .......... ಋತೌ (ಆ ಕಾಲದ ಋತುವಿನ ಹೆಸರು) .......... ಮಾಸೇ (ಆ ಮಾಸದ ಹೆಸರು) .......... ಪಕ್ಷೇ (ಶುಕ್ಲ ಅಥವಾ ಕೃಷ್ಣ ಪಕ್ಷ) .......... ತಿಥೌ (ಆ ದಿನದ ತಿಥಿ) .......... ವಾಸರೇ [ಆ ದಿನದ ಹೆಸರು, ಭಾನು (ರವಿ), ಸೋಮ (ಇಂದು), ಮಂಗಳ (ಭೌಮ), ಬುಧ (ಸೌಮ್ಯ), ಗುರು (ಬೃಹಸ್ಪತಿ), ಶುಕ್ರ (ಭಾರ್ಗವ), ಶನಿ (ಸ್ಥಿರ)] ವಿಷ್ಣು ನಕ್ಷತ್ರ, ವಿಷ್ಣುಯೋಗ, ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತಿ (ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು).

ಅಸ್ಮತ್ ಪಿತ್ರಾದಿ ಸರ್ವೇಕಾರುಣ್ಯ ಪಿತೄಣಾಂ ಅಕ್ಷಯ ಪುಣ್ಯ ಲೋಕಾವಾಪ್ತ್ಯರ್ಥಂ ಸೂರ್ಯೋಪರಾಗ / ಚಂದ್ರೋಪರಾಗ / ಅರ್ಧೋದಯ / ಮಹೋದಯ ಪುಣ್ಯಕಾಲೇ / ದಕ್ಷಿಣಾಯನ / ಉತ್ತರಾಯಣ ಪುಣ್ಯಕಾಲೇ / ಕನ್ಯಾಗತೇ ಸವಿತರಿ ಆಷಾಢ್ಯಾದಿ ಪಂಚಮಹಾಽಪರ ಪಕ್ಷೇಷು ಅಸ್ಮಿನ್ ಪಿತೃಪಕ್ಷೇ ಸಕೃನ್ಮಹಾಲಯೇ / ಗಂಗಾಕಾವೇರೀ ತೀರೇ ಶ್ರಾದ್ಧಪ್ರತಿನಿಧಿ ಸದ್ಯಃ ತಿಲತರ್ಪಣಂ ಆಚರಿಷ್ಯೇ.

ತಿಲೋದಕದಿಂದ ಈ ಕೆಳಗಿನವರುಗಳಿಗೆ ಅವರವರ ಹೆಸರು, ಗೋತ್ರ, ರೂಪಗಳನ್ನು ಹೇಳಿಕೊಂಡು ಮೂರು (3) ಸಲ ತರ್ಪಣ ಕೊಡಬೇಕು.

1. ಅಸ್ಮತ್ ಪಿತರಂ (ತಂದೆ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

2. ಅಸ್ಮತ್ಪಿತಾಮಹಂ (ತಾತ) .......... ಶರ್ಮಾಣಂ .......... ಗೋತ್ರಂ ರುದ್ರರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

3. ಅಸ್ಮತ್ ಪ್ರಪಿತಾಮಹಂ (ಮುತ್ತಾತ) .......... ಶರ್ಮಾಣಂ .......... ಗೋತ್ರಂ ಆದಿತ್ಯರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

4. ಅಸ್ಮಿನ್ ಮಾತರಂ (ತಾಯಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

5. ಅಸ್ಮತ್ ಪಿತಾಮಹೀಂ (ತಂದೆಯ ತಾಯಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ರುದ್ರರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

6. ಅಸ್ಮತ್ ಪ್ರಪಿತಾಮಹೀಂ (ತಂದೆ ಅಜ್ಜಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ಆದಿತ್ಯರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

6(a) ಬಲತಾಯಿ ವಿಚಾರದಲ್ಲಿ

ಅಸ್ಮತ್ ಸಪತ್ನಮಾತರಂ .......... ದೇವಿದಾಂ/ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

7. ಅಸ್ಮನ್ಮಾತಾಮಹಂ (ತಾಯಿಯ ತಂದೆ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

8. ಅಸ್ಮನ್ಮಾತುಃ ಪಿತಾಮಹಂ (ತಾಯಿಯ ತಾತ) .......... ಶರ್ಮಾಣಂ .......... ಗೋತ್ರಂ ರುದ್ರರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

9. ಅಸ್ಮನ್ಮಾತುಃ ಪ್ರಪಿತಾಮಹಂ (ತಾಯಿಯ ಮುತ್ತಾತ) .......... ಶರ್ಮಾಣಂ .......... ಗೋತ್ರಂ ಆದಿತ್ಯರೂಪಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

10. ಅಸ್ಮನ್ಮಾತಾಮಹೀಂ (ತಾಯಿಯ ತಾಯಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

11. ಅಸ್ಮನ್ಮಾತುಃ ಪಿತಾಮಹೀಂ (ತಾಯಿಯ ಅಜ್ಜಿ) .......... ದೇವಿದಾಂ / ಕವಿದಂ .......... ಗೋತ್ರಾಂ ರುದ್ರ ರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

12. ಅಸ್ಮನ್ಮಾತುಃ ಪ್ರಪಿತಾಮಹೀಂ (ತಾಯಿಯ ಮುತ್ತಜ್ಜಿ) .......... ದೇವಿದಾಂ/ ಕವಿದಾಂ .......... ಗೋತ್ರಾಂ ಆದಿತ್ಯರೂಪಾಂ ಸ್ವಧಾನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (3 ಸಲ).

ಈ ಕೆಳಗಿನವರುಗಳಿಗೆ ಕೇವಲ ಒಂದಾವರ್ತಿ ಮಾತ್ರ ತರ್ಪಣ ಕೊಡಬೇಕು.

1. ಆತ್ಮಪತ್ನೀಂ (ಹೆಂಡತಿ) .......... ದೇವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

2. ಅಸ್ಮತ್‌ಸುತಂ (ಮಗ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

3. ಅಸ್ಮತ್ ಜ್ಯೇಷ್ಠಭ್ರಾತರಂ (ಅಣ್ಣ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

4. ಅಸ್ಮತ್ ಕನಿಷ್ಠ ಭ್ರಾತರಂ (ತಮ್ಮ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

5. ಅಸ್ಮತ್ ಜ್ಯೇಷ್ಠ ಪಿತೃವ್ಯಂ (ದೊಡ್ಡಪ್ಪ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

6. ತತ್ಪತ್ನೀಂ (ದೊಡ್ಡಮ್ಮ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

7. ಅಸ್ಮತ್ ಕನಿಷ್ಠ ಪಿತೃವ್ಯಂ (ಚಿಕ್ಕಪ್ಪ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

8. ತತ್ಪತ್ನೀಂ (ಚಿಕ್ಕಮ್ಮ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

9. ಅಸ್ಮತ್ ಮಾತುಲಂ (ಸೋದರ ಮಾವ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

10. ತತ್ಪತ್ನೀಂ (ಸೋದರತ್ತೆ ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

11. ಅಸ್ಮದ್ದುಹಿತರಂ (ಮಗಳು) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

12. ಆತ್ಮ ಭಗಿನೀಂ (ಅಕ್ಕ ತಂಗಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

13. ಅಸ್ಮತ್ ದೌಹಿತ್ರಂ (ಮಗಳ ಮಗ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

14. ಅಸ್ಮತ್ ಭಾಗಿನೇಯಕಂ (ಅಕ್ಕ ತಂಗಿಯರ ಮಕ್ಕಳು) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

15. ಅಸ್ಮತ್ ಪಿತೃಭಗಿನೀಂ (ಸೋದರತ್ತೆ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

16. ತದ್ಭರ್ತಾರಂ (ಸೋದರ ಮಾವ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

17. ಅಸ್ಮತ್ ಮಾತೃಭಗಿನೀಂ (ತಾಯಿಯ ಅಕ್ಕ ತಂಗಿ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

18. ತದ್ಭರ್ತಾರಂ (ಸೋದರ ಮಾವ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

19. ಅಸ್ಮತ್ ಜಾಮಾತರಂ (ಅಳಿಯ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

20. ಅಸ್ಮತ್ ಭಾವುಕಂ (ಭಾವ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

21. ಅಸ್ಮತ್ ಸ್ನುಷಾಂ (ಸೊಸೆ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

22. ಅಸ್ಮತ್ ಶ್ವಶುರಂ (ಹೆಣ್ಣು ಕೊಟ್ಟ ಮಾವ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

23. ಅಸ್ಮತ್ ಶ್ವಶ್ರೂಃ (ಹೆಣ್ಣು ಕೊಟ್ಟ ಅತ್ತೆ ) .......... ದೇವಿದಾಂ / ಕವಿದಾಂ .......... ಗೋತ್ರಾಂ ವಸುರೂಪಾಂ ಸ್ವಧಾನಮಸ್ತರ್ಪಯಾಮಿ.

24. ಅಸ್ಮತ್ ಸ್ಯಾಲಕಂ (ಹೆಂಡತಿಯ ಸಹೋದರರು) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

25. ಅಸ್ಮತ್ ಸಖಾಯಂ (ಆಪ್ತರು) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

26. ಅಸ್ಮದ್ಗುರುಂ (ಗುರು) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

27. ಅಸ್ಮದಾಚಾರ್ಯಂ (ಆಚಾರ್ಯ) .......... ಶರ್ಮಾಣಂ .......... ಗೋತ್ರಂ ವಸುರೂಪಂ ಸ್ವಧಾನಮಸ್ತರ್ಪಯಾಮಿ.

ಸೂಚನೆ : ಮೇಲೆ ತಿಳಿಸಿರುವ ಬಂಧು ವರ್ಗಾದಿಗಳಲ್ಲಿ ಜೀವಂತವಾಗಿರುವವರನ್ನು ಬಿಟ್ಟು ಉಳಿದವರಿಗೆ ತರ್ಪಣ ಕೊಡಬೇಕು.

ಯಸ್ಯ ಸ್ಮೃತ್ಯಾಚನಾಮೋಕ್ತ್ಯಾತಪೋಯಜ್ಞ ಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ । ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತುಮೇ ॥

ಅನೇನ ಮಯಾ ಸೂರ್ಯೋಪರಾಗ / ಚಂದ್ರೋಪರಾಗ / ಅರ್ಧೋದಯ / ಮಹೋದಯ ಪುಣ್ಯಕಾಲೇ / ದಕ್ಷಿಣಾಯನ / ಉತ್ತರಾಯಣ ಪುಣ್ಯಕಾಲೇ / ಪಿತೃಪಕ್ಷೇ ಸಕೃನ್ಮಹಾಲಯೇ / ತೀರ್ಥಕ್ಷೇತ್ರೇ ಕೃತೇನ ತಿಲತರ್ಪಣೇನ ಶ್ರೀಮಜ್ಜನಾರ್ದನ ವಾಸುದೇವಃ ಪ್ರಿಯತಾಂ ಪ್ರೀತೋ ವರದೋ ಭವತು ॥ ಎಂದು ಹೇಳಿ ಅಂಗೈಯಲ್ಲಿ ನೀರು ಹಾಕಿಕೊಂಡು ಬಿಡಬೇಕು.

ಮಧ್ಯೇ ಮಂತ್ರ ತಂತ್ರ ಸ್ವರ, ವರ್ಣ, ಧ್ಯಾನ, ನೇಮ ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರ ಜಪಂ ಕರಿಷ್ಯೆ । ಅಚ್ಯುತಾಯನಮಃ । ಅನಂತಾಯನಮಃ । ಗೋವಿಂದಾಯ ನಮಃ ॥ (ದ್ವಿರಾವರ್ತಿ) ಅಚ್ಯುತಾನಂತ ಗೋವಿಂದೇಭ್ಯೋ ನಮಃ ।

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ಕರೋಮಿಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ಎಂದು ಹೇಳಿ ನೀರು ಬಿಡುವುದು.

॥ ಶ್ರೀ ಕೃಷ್ಣಾರ್ಪಣಮಸ್ತು ॥

ಮೇಲೆ ತಿಳಿಸಿರುವಂತೆ ವಿಸ್ತಾರವಾಗಿ ತರ್ಪಣ ಮಾಡಲು ಕಾಲಾವಕಾಶವಿಲ್ಲದಿದ್ದರೆ

ಈ ಕೆಳಗಿನ ಶ್ಲೋಕ ಹೇಳಿಕೊಂಡು ಮೂರು ಮೂರು ಸಲ ಅಂಜಲಿದಾನ ಮಾಡಬೇಕು.

ಆ ಬ್ರಹ್ಮ ಸ್ತಂಭ ಪರ್ಯನ್ತಂ ದೇವರ್ಷಿ ಪಿತೃಮಾನವಾಃ ।<br>
ತೃಪ್ಯನ್ತು ಪಿತರಃ ಸರ್ವೇ ಪಿತೃ ಮಾತಾಮಹಾದಯಃ ॥<br>
ಅತೀತ ಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ ।<br>
ಆ ಬ್ರಹ್ಮ ಭುವನಾಲ್ಲೋಕಾದಿದಮಸ್ತು ತಿಲೋದಕಂ ॥

ಸಂಬಂಧಿಗಳಿಗೆ ತರ್ಪಣ ಕೊಡುವಾಗ ಗೋತ್ರಾದಿಗಳು ತಿಳಿಯದೇ ಇದ್ದರೆ :

ಯೇಕೇಚಾಸ್ಮತ್ ಕುಲೇ ಜಾತಾಃ ಅಪುತ್ರಾಗೋತ್ರಿಣೋ ಮೃತಾಃ ।ತೇ ಗೃಹ್ಣನ್ತು ಮಯಾದತ್ತಂ ವಸ್ತ್ರ (ಸೂತ್ರ) ನಿಷ್ಪೀಡನೋದಕಂ ॥ ಎಂದು ಹೇಳಿ ಹೊದ್ದಿಕೊಂಡಿದ್ದ ವಸ್ತ್ರದಲ್ಲಿನ ನೀರನ್ನಾಗಲೀ, ಜನಿವಾರದ ನೀರನ್ನಾಗಲೀ ಭೂಮಿಯ ಮೇಲೆ ಹಿಂಡಬೇಕು.

## ಶಾಂತಿ ವಿಚಾರ

### 1. ಉಗ್ರರಥ ಶಾಂತಿ

ಜನ್ಮಕಾಲ ಮೊದಲು ಅರವತ್ತನೇ ವರ್ಷ ಬಂದಾಗ, ಜನ್ಮವರ್ಷ, ಜನ್ಮಮಾಸ, ಜನ್ಮನಕ್ಷತ್ರ, ಜನ್ಮದಿನದಲ್ಲಿ ಎಲ್ಲ ಅರಿಷ್ಟಗಳ ಪರಿಹಾರಕ್ಕಾಗಿ ಆಚರಿಸತಕ್ಕ ಶಾಂತಿ ಕ್ರಮವನ್ನು ಉಗ್ರರಥ ಶಾಂತಿ ಎನ್ನುವರು. ಉಗ್ರರಥ ಶಾಂತಿಯನ್ನು ಸ್ವಗೃಹ, ದೇವಸ್ಥಾನ ಅಥವಾ ನದೀ ತೀರದಲ್ಲಿ ನಡೆಸಬಹುದು.

ಈ ಶಾಂತಿ ಕ್ರಮದಲ್ಲಿ ಪ್ರಧಾನ ದೇವತೆ ಉಗ್ರನೆಂಬುವ ಮೃತ್ಯುಂಜಯ. ಅಧಿದೇವತೆ ಪ್ರಜಾಪತಿ. ಪ್ರತ್ಯಧಿದೇವತೆ ಯಮ. ಗಣಪತಿ, ದಿಕ್ಪಾಲಕರು, ವರುಣ, ವಿಷ್ಣು, ನದೀ ದೇವತೆ, ಸಪ್ತಚಿರಂಜೀವಿಗಳು, ದುರ್ಗಾ ಮೊದಲಾದ ದೇವತೆಗಳನ್ನು ಕಲಶಗಳಲ್ಲಿ ಆವಾಹನೆ ಮಾಡಿ, ಪೂಜಿಸಿ, ನವಗ್ರಹ ಪುರಸ್ಸರ ಶಾಂತಿ ಹೋಮ ಆಚರಿಸಬೇಕು. ಅನಂತರ ಯಜಮಾನನ್ನು , ಕುಟುಂಬ ವರ್ಗದೊಂದಿಗೆ ಕೂರಿಸಿ, ನವಗ್ರಹ ಮಂತ್ರಗಳು, ಆಯುಃ ಸೂಕ್ತ , ಶ್ರೀಸೂಕ್ತ, ಪುರುಷಸೂಕ್ತ ಮೊದಲಾದ ಮಂತ್ರಗಳೊಂದಿಗೆ ಅಭಿಷೇಕ ಮಾಡಬೇಕು. ಅನಂತರ ಯಜಮಾನನು ತಾನು ಧರಿಸಿದ್ದ ವಸ್ತ್ರಗಳನ್ನು ಆಚಾರ್ಯನಿಗೆ ಕೊಡಬೇಕು. ಆಚಾರ್ಯ ಪೂಜೆ, ಶಕ್ತ್ಯಾನುಸಾರ ಕಲಶ

ಪ್ರತಿಮಾ ವಸ್ತ್ರ ದಕ್ಷಿಣಾ ದಾನ, ನವಗ್ರಹ ದಾನ ಮಾಡಿ ಬ್ರಾಹ್ಮಣ, ಸುವಾಸಿನಿಯರ ಸಂತರ್ಪಣೆ ನಡೆಸಿ, ಆಶೀರ್ವಾದ ಸ್ವೀಕರಿಸತಕ್ಕದ್ದು.

### 2. ಭೀಮರಥ ಶಾಂತಿ

ಜನ್ಮಕಾಲ ಮೊದಲು ಎಪ್ಪತ್ತನೇ ವರ್ಷ ಬಂದಾಗ ಜನ್ಮಮಾಸ, ಜನ್ಮನಕ್ಷತ್ರ, ಜನ್ಮದಿನದಲ್ಲಿ ಸಕಲಾರಿಷ್ಠ ಪರಿಹಾರಕ್ಕಾಗಿ ನಡೆಸಬೇಕಾದ ಶಾಂತಿ.

ಈ ಶಾಂತಿ ಕ್ರಮದಲ್ಲಿ ಭೀಮ ಮೃತ್ಯುಂಜಯ ಪ್ರಧಾನ ದೇವತೆ. ಬ್ರಹ್ಮ, ವಿಷ್ಣು, ನವಗ್ರಹ, ಲೋಕಪಾಲ, ದುರ್ಗಾ, ಗಣಪತಿ ಮೊದಲಾದ ಅಧಿ ದೇವತೆಗಳನ್ನು ಕಲಶಗಳಲ್ಲಿ ಆವಾಹಿಸಿ ಪೂಜಿಸಬೇಕು. ನವಗ್ರಹ ಹೋಮ, ವೇದ ಪಾರಾಯಣ, ರುದ್ರ, ನಮಕಚಮಕಗಳು, ಶ್ರೀ ಸೂಕ್ತ, ಭೂಸೂಕ್ತ ಜಪಿಸಬೇಕು.

ಅನಂತರ ಯಜಮಾನನಿಗೆ ಕಲಶೋದಕದಿಂದ ಅಭಿಷೇಕ ಮಾಡಬೇಕು. ಅಭಿಷೇಕಾನಂತರ ಯಜಮಾನನು ಹೊಸ ವಸ್ತ್ರ ಧರಿಸಿ, ಆಜ್ಯಾವೇಕ್ಷಣ ಮಾಡಿ, ಅಪಮೃತ್ಯು ಪರಿಹಾರಕ್ಕಾಗಿ ದಾನಗಳನ್ನು ಮಾಡಿ, ಬ್ರಾಹ್ಮಣ ಭೋಜನ ಮಾಡಿಸಿ, ಆಶೀರ್ವಾದ ಸ್ವೀಕರಿಸತಕ್ಕದ್ದು.

### 3. ಸಹಸ್ರ ಚಂದ್ರದರ್ಶನ ಶಾಂತಿ

ಜನ್ಮಕಾಲ ಮೊದಲ್ಗೊಂಡು ಅಧಿಕಮಾಸವನ್ನು ಗಣನೆಗೆ ತೆಗೆದುಕೊಂಡು 81 ವರ್ಷ 1 ತಿಂಗಳು ಆದಾಗ ಸಹಸ್ರಚಂದ್ರದರ್ಶನವಾಗುವುದರಿಂದ ಈ ಕಾಲದಲ್ಲಿ ಆಚರಿಸತಕ್ಕ ಶಾಂತಿಯನ್ನು ಸಹಸ್ರ ಚಂದ್ರದರ್ಶನ ಶಾಂತಿ ಎನ್ನುವರು. ಉತ್ತರಾಯಣದಲ್ಲಿ ಶುಕ್ಲ ಪಕ್ಷ , ಶುಭ ದಿನದಲ್ಲಿ ಈ ಶಾಂತಿಯನ್ನು ಮಾಡಿಕೊಳ್ಳಬೇಕು. ಕೂಷ್ಮಾಂಡ ಹೋಮಾ ನಂತರ, ಗಣಹೋಮ, ಪುಣ್ಯಾಹ, ನಾಂದಿ, ಕೌತುಕ ಬಂಧನ, ಅಂಕುರಾರ್ಪಣಾದಿಗಳನ್ನು ಮಾಡಿ, ಪ್ರಧಾನ ದೇವತೆ ವಿಷ್ಣು, ಬ್ರಹ್ಮ ಮೃತ್ಯುಂಜಯ ಅಧಿ ಪ್ರತ್ಯಧಿ ದೇವತೆಗಳು, ದಿಕ್ಪಾಲಕರು, ನವಗ್ರಹಾದಿಗಳನ್ನು ಆವಾಹಿಸಿ, ಷೋಡಶೋಪಚಾರ ಪೂಜೆ ಮಾಡಿ ನವಗ್ರಹಪುರಸ್ಸರ ಹೋಮ ಪ್ರಾರಂಭಿಸಬೇಕು. ಅನಂತರ ಯಜಮಾನನಿಗೆ ಕಲಶೋದಕದಿಂದ ಅಭಿಷೇಕ, ಅಭಿಷೇಕಾನಂತರ ಯಜಮಾನನು ಹೊಸ ವಸ್ತ್ರ ಧರಿಸಿ ಸೂರ್ಯನನ್ನು ಉಪಸ್ಥಾನಮಾಡಬೇಕು. ಅನಂತರ ಆಯುಷ್ಯ ಸೂಕ್ತ , ಶ್ರೀ ಸೂಕ್ತ , ಭೂಸೂಕ್ತ , ಮಹಾಶಾಂತಿ ಜಪ, ಪುಣ್ಯಾಹ ವಾಚನ, ಋತ್ವಿಗ್ ದಕ್ಷಿಣಾದಾನ, ಕಲಶ ಪ್ರತಿಮಾದಾನ, ದಶದಾನಗಳು, ಫಲಪೂಜೆ, ಆರತಿ, ಬ್ರಾಹ್ಮಣಭೋಜನ, ಆಶೀರ್ವಾದಗಳಿಂದ ಶಾಂತಿ ವಿಧಿ ಸಂಪೂರ್ಣವಾಗುವುದು.

# ನವಗ್ರಹ ವಿಚಾರ

| ಗ್ರಹಗಳು | ಸಮಿತ್ತು | ಚರು (ನೈವೇದ್ಯ) | ಪ್ರತಿಮಾ ದ್ರವ್ಯ | ಪೂಜಾ ಪುಷ್ಪ | ಅಗ್ನಿ | ರಾಶ್ಯಾಧಿಪತಿ | ಗ್ರಹಗಳ ಸ್ವಭಾವ | ಗ್ರಹಶಾಂತಿಯ ಪೂಜಾವಿಧಿ ಮತ್ತು ಸತ್ಪಾತ್ರ ಭೋಜನ | ಗ್ರಹಶಾಂತಿ ಪ್ರಾರಂಭಕ್ಕೆ ಪ್ರಶಸ್ತವಾದ ದಿನ, ನಕ್ಷತ್ರ | ಗ್ರಹಶಾಂತಿಗೆ ನಾಮ ಜಪ | ಗ್ರಹಶಾಂತಿಗೆ ನಿತ್ಯ ಮಾಡುವ ನಾಮ ಜಪ ಸಂಖ್ಯೆ | ದಾನ |
|---|---|---|---|---|---|---|---|---|---|---|---|---|
| ರವಿ | ಅಶ್ವತ್ಥ (ಅರಳೆ) | ಗುಡೋದನ/ ಗೋಧೂಮಾನ್ನ ಶಾಲ್ಯಾನ್ನ/ಬಿಳೀ ಅನ್ನ | ತಾಮ್ರ | ಕೆಂಪು ತಾವರೆ | ಕಪಿಲಾಗ್ನಿ | ಸಿಂಹ | ಕ್ರೂರ | 7 ದಿನ | ರವಿವಾರ ಹಸ್ತ ನಕ್ಷತ್ರ | ಓಂ ಸೂರ್ಯಾಯ ನಮಃ | 1008 | ಕಪಿಲ ಧೇನು |
| ಚಂದ್ರ | ಪಲಾಶ (ಮುತ್ತುಗ) | ಹಾಲು ಖೀರು (ಪಾಯಸ) | ಸ್ಫಟಿಕ | ಬಿಳೀ ತಾವರೆ | ಪಿಂಗಳಾಗ್ನಿ | ಕರ್ಕಾಟಕ | ಸೌಮ್ಯ | 11 ದಿನ | ಸೋಮವಾರ ಚಿತ್ತಾ ನಕ್ಷತ್ರ | ಓಂ ಚಂದ್ರಾಯ ನಮಃ | 1008 | ಶಂಖ |
| ಕುಜ | ಖದಿರ (ಕಗ್ಗಲಿ) | ಬೆಲದನ್ನ-ಹವಿಸ್ಸು ಗಂಜಿ/ಬಸಿಯದೇ ಮಾಡಿದ ಅನ್ನ | ರಕ್ತಚಂದನ | ಕೆಂಪು ಕಣಗಲೆ ಕರವೀರ | ಧೂಮಕೇತ್ವಗ್ನಿ | ಮೇಷ ವೃಶ್ಚಿಕ | ಕ್ರೂರ | 10 ದಿನ | ಮಂಗಳವಾರ ಸ್ವಾತಿ ನಕ್ಷತ್ರ | ಓಂ ಮಂಗಳಾಯ ನಮಃ | 1008 | ಗೂಳಿ (ಎತ್ತು) |
| ಬುಧ | ಅಪಾಮಾರ್ಗ (ಉತ್ತರಣೆ) | ಹಾಲು ಖೋವಾ | ಸುವರ್ಣ (ಚಿನ್ನ) | ಜಾಜಿ ಹೂ | ಜಾತರಾಗ್ನಿ | ಕನ್ಯಾ ಮಿಥುನ | ಸೌಮ್ಯ | 4 ದಿನ | ಬುಧವಾರ ವಿಶಾಖ ನಕ್ಷತ್ರ | ಓಂ ಬುಧಾಯ ನಮಃ | 1008 | ಸುವರ್ಣ (ಚಿನ್ನ) |
| ಗುರು | ಅಶ್ವತ್ಥ (ಅರಳೆ) | ಮೊಸರನ್ನ | ಸುವರ್ಣ (ಚಿನ್ನ) | ಹಳದಿ ಸೇವಂತಿಕೆ | ಶಿಖಾಗ್ನಿ | ಧನುಸ್ಸು ಮೀನ | ಸೌಮ್ಯ | 19 ದಿನ | ಗುರುವಾರ ಅನೂರಾಧ ನಕ್ಷತ್ರ | ಓಂ ಗುರವೇ ನಮಃ | 1008 | ಪೀತಾಂಬರೀ (ಹಳದಿ ವಸ್ತ್ರ) |
| ಶುಕ್ರ | ಔದುಂಬರ (ಅತ್ತಿ) | ತುಪ್ಪದನ್ನ | ರಜತ (ಬೆಳ್ಳಿ) | ಬಿಳೀ ತಾವರೆ | ಹಾಟಕಾಗ್ನಿ | ತುಲಾ ವೃಷಭ | ಸೌಮ್ಯ | 16 ದಿನ | ಶುಕ್ರವಾರ ಜ್ಯೇಷ್ಠಾ ನಕ್ಷತ್ರ | ಓಂ ಶುಕ್ರಾಯ ನಮಃ | 1008 | ಶ್ವೇತಾಶ್ವ (ಬಿಳಿ ಕುದುರೆ) |
| ಶನಿ | ಶಮೀ (ಬನ್ನಿ) | ಎಳ್ಳು ಅಥವಾ ಉದ್ದಿನ ಅನ್ನ | ಕಬ್ಬಿಣ | ಶಂಖ ಹೂ | ಮಹಾ ತೇಜಾಗ್ನಿ | ಮಕರ ಕುಂಭ | ಕ್ರೂರ | 23 ದಿನ | ಶನಿವಾರ ಶುಕ್ಲ ಪ್ರತಿಪತ್ | ಓಂ ಶನೈಶ್ಚರಾಯ ನಮಃ | 1008 | ಕೃಷ್ಣಧೇನು (ಕಪ್ಪು ಹಸು) |
| ರಾಹು | ದೂರ್ವಾ (ಗರಿಕೆ) | ಉದ್ದಿನ ಅನ್ನ | ಸೀಸ | ಮಂದಾರ | ಹುತಾಶನಾಗ್ನಿ | ಕನ್ಯಾ | ಕ್ರೂರ | 18 ದಿನ | ಅಮಾವಾಸ್ಯೆ ನಂತರ ಬರುವ ಮೊದಲನೇ ಶನಿವಾರ | ಓಂ ರಾಹವೇ ನಮಃ | 1008 | ಅಯಃ (ಕಬ್ಬಿಣ) |
| ಕೇತು | ಕುಶ (ದರ್ಭೆ) | ಚಿತ್ರಾನ್ನ (ಜೀರಿಗೆ ಅನ್ನ) | ಕಂಚು | ಕೆಂಪು ಕಣಗಲೆ | ರೌದ್ರಾಗ್ನಿ | ಮೀನ | ಕ್ರೂರ | 17 ದಿನ | ಮಂಗಳವಾರ ಸ್ವಾತಿ ನಕ್ಷತ್ರ | ಓಂ ಕೇತವೇ ನಮಃ | 1008 | ಛಾಗಃ (ಆಡು) |

## ಸಾಮವೇದ ರೀತ್ಯಾ ಗ್ರಹಸ್ಥಾಪನೆ

| ಈಶಾನ್ಯ | ಪೂರ್ವ | ಆಗ್ನೇಯ |
|---|---|---|
| ಕೇತು ಹುರಳಿ | ಚಂದ್ರ ಅಕ್ಕಿ | ಕುಜ ತೊಗರಿ |
| ಉತ್ತರ: ಗುರು ಕಡಲೆ | ರವಿ ಗೋಧಿ | ಬುಧ ಹೆಸರು :ದಕ್ಷಿಣ |
| ರಾಹು ಉದ್ದು | ಶುಕ್ರ ಅವರೆ | ಶನಿ ಎಳ್ಳು |
| ವಾಯುವ್ಯ | ಪಶ್ಚಿಮ | ನೈಋತ್ಯ |

## ಗ್ರಹಗಳ ಸ್ಥಾನ, ಕಾರಕತ್ವ, ಸ್ವಭಾವ, ಗೋಚಾರ ಫಲ ದಶಾ ಶಾಂತಿ ಇತ್ಯಾದಿಗಳು

| | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ಶತ್ರು | ಶು, ಶನಿ | ಯಾರೂ ಇಲ್ಲ | ಬುಧ | ಚಂದ್ರ | ಬುಧ ಶುಕ್ರ | ರವಿ ಚಂದ್ರ | ರ,ಚಂ,ಕು | ರ, ಚಂ,ಕು | ರ,ಚಂ,ಕು |
| ತತ್ವ | ಅಗ್ನಿ | ಜಲ | ಅಗ್ನಿ | ಭೂಮಿ | ಆಕಾಶ | ಜಲ | ವಾಯು | ವಾಯು | ಅಗ್ನಿ |
| ದಶಾವರ್ಷಗಳು | 6 ವರ್ಷ | 10 ವರ್ಷ | 7 ವರ್ಷ | 17 ವರ್ಷ | 16 ವರ್ಷ | 20 ವರ್ಷ | 19 ವರ್ಷ | 18 ವರ್ಷ | 7 ವರ್ಷ |
| ಗೋಚಾರದಲ್ಲಿ ಶುಭಸ್ಥಾನ | ಜನ್ಮ ರಾಶ್ಯಾತ್ 3,6,11 | ಜನ್ಮ ರಾಶ್ಯಾತ್ 1,3,6,7,10,11 | ಜನ್ಮ ರಾಶ್ಯಾತ್ 3,6,11 | ಜನ್ಮ ರಾಶ್ಯಾತ್ 2,4,6,8,10,11 | ಜನ್ಮ ರಾಶ್ಯಾತ್ 2,5,7,9,11 | ಜನ್ಮ ರಾಶ್ಯಾತ್ 1,2,3,4,5,8,9,11,12 | ಜನ್ಮ ರಾಶ್ಯಾತ್ 3,6,11 | ಜನ್ಮ ರಾಶ್ಯಾತ್ 3,6,11 | ಜನ್ಮ ರಾಶ್ಯಾತ್ 3,6,11 |
| ಗೋಚಾರದಲ್ಲಿ ಸಾಧಾರಣ ಫಲ | 1 ತಿಂಗಳು | 21/4 ದಿನಗಳು | 11/4 ತಿಂಗಳು | 1 ತಿಂಗಳು | 12 ತಿಂಗಳು | 1 ತಿಂಗಳು | 30 ತಿಂಗಳು | 18 ತಿಂಗಳು | 18 ತಿಂಗಳು |
| ಗೋಚಾರದಲ್ಲಿ ವಿಶೇಷ ಫಲ | ಮೊದಲು 5 ತಿಂಗಳು | ಅಂತ್ಯದಲ್ಲಿ 3 ಘಳಿಗೆ | ಮೊದಲ 8 ದಿನ | ಸರ್ವದಾಫಲ | ಮಧ್ಯದಲ್ಲಿ 2 ತಿಂಗಳು | ಮಧ್ಯದಲ್ಲಿ 7 ದಿನಗಳು | ಅಂತ್ಯದ 3 ತಿಂಗಳು | ಅಂತ್ಯದ 3 ತಿಂಗಳು | ಅಂತ್ಯದ 3 ತಿಂಗಳು |
| ಕ್ರೂರ ದಶೆಯಲ್ಲಿ ಮಾಡತಕ್ಕ ಪೂಜಾ ಮತ್ತು ದಾನ | ಚಿನ್ನದ ಪ್ರತಿಮೆ ಗೋಧಿ ಕೆಂಪು ವಸ್ತ್ರ | ಬೆಳ್ಳಿ ಪ್ರತಿಮೆ ಅಕ್ಕಿ ಬಿಳೀ ವಸ್ತ್ರ | ತಾಮ್ರದ ಪ್ರತಿಮೆ ತೊಗರಿ ಕೆಂಪು ವಸ್ತ್ರ | ಚಿನ್ನದ ಪ್ರತಿಮೆ ಹೆಸರು ಪೀತ ವಸ್ತ್ರ | ಚಿನ್ನದ ಪ್ರತಿಮೆ ಹುಸಿಕಡಲೆ ಹಳದಿ ವಸ್ತ್ರ | ಬೆಳ್ಳಿಯ ಪ್ರತಿಮೆ ಅವರೆ ಬಿಳೀ ವಸ್ತ್ರ | ಕಬ್ಬಿಣದ ಪ್ರತಿಮೆ ಎಳ್ಳು ಕಪ್ಪು ವಸ್ತ್ರ | ಸೀಸದ ಪ್ರತಿಮೆ ಉದ್ದು ಕಪ್ಪು ವಸ್ತ್ರ | ಕಂಚಿನ ಪ್ರತಿಮೆ ಹುರಳಿ ಚಿತ್ರ ವಸ್ತ್ರ |

